# ಕಲಸುಮೇಲೋಗರ



ಮಂಜೇಶ್ವರ ಅನಂತ ರಾವ್
ಪುತ್ತೂರು

1948



ಬೆಲೆ: ಆಣೆ ೧೪.

ಪ್ರಕಾಶಕರು:
ಬಾಳಿಗಾ ಎಂಡ್ ಸನ್ಸ್, ರಥಬೀದಿ, ಮಂಗಳೂರು

# ಮುನ್ನುಡಿ

ಈ ಚಿಕ್ಕ ಪುಸ್ತಕದಲ್ಲಿನ ಕವಿತೆಗಳು ಕ್ರಿ. ಶ. ೧೯೦೯ರಿಂದ ಮಹಾತ್ಮಾ ಗಾಂಧೀಜಿಯವರು ದಿವಂಗತರಾದ ವರೆಗಿನ ೩೮॥ ವರ್ಷಗಳಲ್ಲಿ ಆಗಾಗ್ಗೆ ರಚಿಸಲ್ಪಟ್ಟವುಗಳಾಗಿವೆ. ಅವುಗಳಲ್ಲಿ ಕೆಲವು ಬೇರೆ ಬೇರೆ ವೃತ್ತಪತ್ರಿಕೆಗಳಲ್ಲಿಯೂ ಪದ್ಯಸಂಗ್ರಹಗಳೇ ಮೊದಲಾದ ಪುಸ್ತಕಗಳಲ್ಲಿಯೂ ಪ್ರಕಟವಾಗಿವೆ.

ಈ ಕವಿತೆಗಳಲ್ಲಿ ಹಲಕೆಲವು ಇತರ ಭಾಷಾಸಾಹಿತ್ಯಗಳಲ್ಲಿನ ಕವಿತೆಗಳ ಆಧಾರದಿಂದ ಬರೆದುವುಗಳೆಂದು ವಾಚಕರಿಗೆ ನೋಡಿದೊಡನೆ ತಿಳಿದೀತು. ಆ ಮೂಲಕವಿತೆಗಳು ಆಯಾ ಭಾಷಾಸಾಹಿತ್ಯಗಳಲ್ಲಿ ಪ್ರಸಿದ್ಧವಾಗಿರುವವುಗಳೇ ಆದುದರಿಂದ (ಉದಾ: ಪೋಪ್, ವರ್ಡ್ಸ್‌ವರ್ತ್, ಶೆಲ್ಲಿ, ಟೆನಿಸನ್, ಸ್ವಿನ್‌ಬರ್ನ್, ಕಿಪ್ಲಿಂಗ್ ಮೊದಲಾದಂತಹವರ ಕೃತಿಗಳು) ಯಾವುದು ಯಾವುದರ ಆಧಾರದಿಂದ ಬರೆದುದೆಂಬುದನ್ನು ಕುರಿತಾಗಿ ಕಾಣಿಸುವುದು ಅಗತ್ಯ ತೋರಲಿಲ್ಲ. ಮೂಲಕವಿತೆಗಳು ಯಾವುವೆಂದು ತಿಳಿಯುವ ಸಂಭವವು ಕಡಿಮೆಯೆಂದು ಗ್ರಹಿಸಬಹುದಾದ ಕೃತಿಗಳ ಮಟ್ಟಿಗೆ ಮತ್ತು ಇತರ ಕೆಲವು ಕವಿತೆಗಳ ಮಟ್ಟಿಗೆ ಅಗತ್ಯವೆಂದು ತೋರಿದ ಸ್ವಲ್ಪ ವಿವರವನ್ನು ಕೆಳಗೆ ಕೊಟ್ಟಿದೆ.

೧ನೇ "ಜೋಗುಳ ಹಾಡು" ಶ್ರೀಮತಿ ಸರೋಜಿನಿ ನಾಯ್ಡು ರವರ ಕವಿತೆಯ ಆಧಾರದಿಂದ ಬರೆದುದು.

೮ನೇ "ಸುಖದುಃಖ" ಮತ್ತು ೨೧ನೇ "ಪದ್ಯರಚನೆ" ಎಂಬವುಗಳು ಹಲವು ವರ್ಷಗಳ ಹಿಂದೆ ಮಂಗಳೂರಿನ ಸೈಂಟ್ ಎಲೋಯ್ಸಿಯಸ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಜೋ. ಸಾಲ್ಡಾಂಞರಿಂದ ರಚಿಸಲ್ಪಟ್ಟು ಆ ಕಾಲೇಜಿನ ವೃತ್ತಪತ್ರಿಕೆಯಲ್ಲಿ ಪ್ರಕಟಿಸಲ್ಪಟ್ಟಿದ್ದ ಎರಡು ಕವಿತೆಗಳ ಆಧಾರದಿಂದ ಬರೆದುವುಗಳು.

೯ನೇ "ಇಬ್ಬನಿಯ ಕಂಬನಿ", ೧೬ನೇ "ಜನ್ಮಕಥೆ" ಮತ್ತು ೨೪ನೇ "ಪರವಸ್ತ್ರ" ಎಂಬವುಗಳು ಶ್ರೀ. ರವೀಂದ್ರನಾಥ ಠಾಕೂರರ ಮೂಲ ವಂಗಕವಿತೆಗಳ ಆಂಗ್ಲ ಭಾಷಾನುವಾದಗಳ ಆಧಾರದಿಂದ ಬರೆದುವುಗಳು.

೧೦ನೇ "ಸಹಕಾರಗೀತ"ವು ದಕ್ಷಿಣ ಕನ್ನಡ ಜಿಲ್ಲೆಯ ಅಗ್ರಗಣ್ಯ ಕವಿಗಳಲ್ಲೊಬ್ಬರಾಗಿದ್ದು ಕ್ರಿ. ಶ. ೧೯೩೭ರಲ್ಲಿ ದಿವಂಗತರಾದ ಪಂಜೆ ಮಂಗೇಶರಾಯರು ರಚಿಸಿದ್ದ ಒಂದು ಕನ್ನಡ ಕವಿತೆಯ ಅನುಕರಣವಾಗಿ ಕ್ರಿ. ಶ.

೧೯ಗಳಲ್ಲಿ ಬರೆದುದಾಗಿದೆ. ಆ ಕವಿತೆಯನ್ನು ಅವರು ತನ್ನ ಕಾಲದ ರಾಷ್ಟ್ರೀಯ ಸ್ಥಿತಿಗತಿಗಳಿಗೆ ಸಂಬಂಧಿಸಿದ ದೇಶಭಕ್ತಿ, ಸ್ವಾತಂತ್ರ್ಯಪ್ರೇಮ, ಪಾರತಂತ್ರ್ಯ ಸಂಕಷ್ಟ, ಮುಂತಾದ ವಿಷಯಗಳ ಮಟ್ಟಿಗೆ ಜನರನ್ನು ಮೂದಲಿಸಿ, ಕೆರಳಿಸಿ, ಹುರಿದುಂಬಿಸುವ ರೀತಿಯ ಅತ್ಯುತ್ತಮ ರುದ್ರಗೀತೆಯನ್ನಾಗಿ ರಚಿಸಿದ್ದರು. ಆದರೆ ಅವರು ಸರಕಾರಿ ನೌಕರರಾಗಿದ್ದುದರಿಂದ ಅದನ್ನು ಪ್ರಕಟಿಸಲಾರದೆ, ಅವರ ಅಚ್ಚುಮೆಚ್ಚಿನ ಆಪ್ತೇಷ್ಟರಾಗಿದ್ದ ಕೆಲವರಿಗೆ ಮಾತ್ರ ಬಾಯಿಪಾಟ ಕಲಿಸಿದ್ದರಷ್ಟೇ ಹೊರತು, ಅವರು ದಿವಂಗತರಾದ ವರೆಗೆ ಅದನ್ನು ಪ್ರಕಟಿಸಲಾಗಿರಲಿಲ್ಲ. ಅನಂತರವೂ ಅದನ್ನು ನಾನು ತಿಳಿದಿರುವ ಮಟ್ಟಿಗೆ ಇದುವರೆಗೆ ಪ್ರಕಟಿಸಿದುದಿಲ್ಲ. ಅವರ ಆ ಗೀತೆಯಲ್ಲಿನ ಭಾವಗಳನ್ನು ಮತ್ತು ಹಲವು ಪದಬಂಧಗಳನ್ನೂ ಇಡೀ ಇಡೀ ಚರಣಗಳನ್ನೂ ಕೂಡ ನನ್ನೀ ಕವಿತೆಯಲ್ಲಿ ಸಹಕಾರಿ ಸಂಘಗಳಿಗೆ ಸಂಬಂಧಿಸುವ ಋಣಬಾಧೆ ಮುಂತಾದ ವಿಷಯಗಳಿಗೆ ಅನ್ವಯಿಸುವಂತೆ ತಿರುಗಿಸಿಕೊಂಡಿದ್ದೇನೆ.

೧೫ನೇ "ದೀಪಾವಳಿಯ ಗೀತಾವಳಿ"ಯನ್ನು ನನ್ನ ವಾಸಸ್ಥಳವಾಗಿರುವ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ ಪುತ್ತೂರು ವಿದ್ಯಾವರ್ಧಕ ಸಂಘದಿಂದ ಸ್ಥಾಪಿತವಾಗಿದ್ದ ಹೈಸ್ಕೂಲಿಗೋಸ್ಕರ ಧನಸಂಗ್ರಹ ಮಾಡುವುದಕ್ಕೆ ಆ ಶಾಲೆಯ ವಿದ್ಯಾರ್ಥಿಗಳು (ಉಪಾಧ್ಯಾಯರಿಂದೊಡಗೂಡಿ) ವರ್ಷಂಪ್ರತಿ ದೀಪಾವಳಿ ಹಬ್ಬದ ಸಮಯದಲ್ಲಿ ಊರೊಳಗೂ ಊರ ಹೊರಗೂ ಮಹಾಜನರ ಮನೆ ಬಾಗಲಿಗೆ ಹೋದಾಗ ಅಲ್ಲಲ್ಲಿಯ ಸಂದರ್ಭಗಳಿಗೆ ತಕ್ಕಂತೆ ಹಾಡುವುದಕ್ಕೆ ಆ ಸಂಘಾಧಿಕಾರಿಗಳ ಅಪೇಕ್ಷೆಯ ಮೇರೆಗೆ "ಮಹಾನವಮಿಯ ಪದಗಳು" ಎಂದು ಕೆಲವು ಸೀಮೆಗಳಲ್ಲಿ ಪ್ರಚಾರದಲ್ಲಿರುವ ಗೀತಗಳ ಮಾದರಿಯನ್ನನುಸರಿಸಿ ಬರೆದುದು.

೧೭ನೇ "ಬಡವರ ಬಿನ್ನಹ"ವೆಂಬುದನ್ನು ಶ್ರೀಮತಿ ಎನ್ನೀ ಬೆಸೆಂಟಮ್ಮನವರ "ಹೋಂ ರೂಲ್" ಚಳವಳಿಯ ಕಾಲದಲ್ಲಿ "ಹೋಂ ರೂಲರನ ದೈನಿಕ ಪ್ರಾರ್ಥನೆ" ಎಂಬ ಹೆಸರಿನಿಂದ ಪ್ರಕಟವಾಗಿದ್ದ ಆಂಗ್ಲಭಾಷೆಯ ಗದ್ಯ ಪ್ರಾರ್ಥನೆಯನ್ನನುಸರಿಸಿ ಬರೆದುದಾಗಿದೆ.

೨೨ನೇ "ನಗುಮೊಗವ ತಳೆದಿರಲು ನಗುತ ಬಳಿಗೆಯ್ದುವರು" ಎಂಬುದು ಶ್ರೀಮತಿ ಎಲ್ಲಾ ವ್ಹೀಲರ್ ವಿಲ್ಕೋಕ್ಸ್ ಎಂಬ ಕವಿಯಿತ್ರಿಯ ಆಂಗ್ಲಪದ್ಯವೊಂದರ ಆಧಾರದಿಂದ ಬರೆದುದು.

೩೧ನೇ "ನುಡಿಗಳಾ ಹಗೆ ಕಿತ್ತುಹಾಕೈ" ಎಂಬುದು ಮೈಸೂರು ವಿಶ್ವವಿದ್ಯಾನಿಲಯದ "ಪ್ರಬುದ್ಧಕರ್ಣಾಟಕ"ವೆಂಬ ವೃತ್ತಪತ್ರಿಕೆಯಲ್ಲಿ ಪ್ರಕಟವಾಗಿದ್ದ ಶ್ರೀಮಾನ್ ಕು. ವೆಂ. ಪುಟ್ಟಪ್ಪನವರ "ಸಾಯುತಿದೆ ನಿಮ್ಮ ನುಡಿ ಓ ಕನ್ನಡದ

ಕಂದರಿರ" ಎಂಬ ಕವಿತೆಯನ್ನೋದಿದಾಗ ಅದರಲ್ಲಿನ ಭಾವಗಳಿಗೆ ಉತ್ತರವಾಗಿ ಒಂದು ಕವಿತೆಯನ್ನು ಬರೆಯಬೇಕೆಂದು ತೊಟ್ಟ ಸಂಕಲ್ಪದ ಫಲವಾಗಿದೆ.

೩೬ನೇ "ಗೇರುಸೊಪ್ಪೆಯ ಜೋಗು" ಎಂಬುದು ಉತ್ತರಕನ್ನಡ ಜಿಲ್ಲೆಯ ಶಿರಾಲಿಯಲ್ಲಿನ ಶ್ರೀ ಚಿತ್ರಾಪುರ ಮಠಾಧೀಶ ಶ್ರೀಮದಾನಂದಾಶ್ರಮ ಸ್ವಾಮಿಗಳವರಿಂದ ರಚಿತವಾದ "ಗೇರಸಪ್ಪಾ ಜಲಪ್ರಪಾತ ಪ್ರಶಸ್ತಿ" ಎಂಬ ಸಂಸ್ಕೃತ ಮೂಲ ಶ್ಲೋಕಗಳ ಅನುವಾದವಾಗಿದೆ.

೩೮ನೇ "ಅಮರನಾತಂ ಗಾಂಧಿತಾತಂ" ಎಂಬುದು ಮಹಾತ್ಮಾ ಗಾಂಧೀಜಿಯವರು ದಿವಂಗತರಾದಾಗ ಊರಲ್ಲೆಲ್ಲ ಅಲ್ಲಲ್ಲಿ ಪ್ರಕಟಿಸಲ್ಪಟ್ಟ ಅನೇಕಾನೇಕ ಕವಿತೆಗಳ ಪೈಕಿ ಆಂಗ್ಲ ಭಾಷೆಯ ಒಂದು ಪದ್ಯದೊಳಗಿನ ಭಾವಗಳಿಂದ ಪ್ರೇರಿತವಾದುದು.

ಈ ಪುಸ್ತಕದಲ್ಲಿ ಕರುಣಾರಸ ಪ್ರಧಾನವಾದ ಕವಿತೆಗಳ ನಡುವೆ ಹಾಸ್ಯರಸಪ್ರಧಾನವಾದ ಕವಿತೆಗಳು ಕಂಡುಬರಬಹುದು; ಅಥವಾ, ಅಸಂಗತತೆಯೆಂದೆಣಿಸಬಹುದಾದುದರ ಬೇರೆ ದೃಷ್ಟಾಂತಗಳೂ ತೋರಿಬರಬಹುದು. ಕವಿತೆಗಳನ್ನು ಕೇವಲ ರಚನಾಕಾಲದ ಅನುಕ್ರಮದಲ್ಲೇ ಪ್ರಕಟಿಸಿಯದೆ. ಇದರ ಯುಕ್ತಾಯುಕ್ತತೆಯನ್ನು ಕುರಿತು ಪ್ರಸ್ತಾವಿಸುವುದು ಅಗತ್ಯವೆಂದು ನನಗನಿಸುವುದಿಲ್ಲ; ಆದರೆ, ಆ ದೆಸೆಯಿಂದ ಈ ಚಿಕ್ಕ ಪುಸ್ತಕಕ್ಕೆ ಇಟ್ಟಿರುವ ಹೆಸರಿನ ಔಚಿತ್ಯವನ್ನಾದರೂ ವಾಚಕರು ಕಂಡುಕೊಂಡಾರೆಂದು ನಾನು ಭಾವಿಸುತ್ತೇನೆ.

ಇದರ ಮುದ್ರಣ ವ ಪ್ರಕಟನ ಕಾರ್ಯಗಳಲ್ಲಿ ಶ್ರಮವಹಿಸಿಕೊಂಡುದಕ್ಕೆ ದಾಮೋದರ ಬಾಳಿಗ, ಬಿ.ಎ.,ರವರಿಗೆ ನಾನು ಋಣಿಯಾಗಿದ್ದೇನೆ. ಈ ಪದ್ಯ ಸಂಗ್ರಹಕ್ಕೆ ಸಂಬಂಧಿಸಿದ ಸಮಸ್ತ ವಿಷಯಗಳಲ್ಲಿಯೂ ನನಗೆ ನನ್ನ ಪರಮ ಮಿತ್ರ ಉಗ್ರಾಣ ಮಂಗೇಶರಾಯರಿಂದ ದೊರೆತ ಸಹಕಾರ ಸಹಾಯ ಸಹಾನುಭೂತಿಗಳು ಹೇಳಿ ತೀರದಷ್ಟಾಗಿವೆ.

ಇತಿ,

ಪುತ್ತೂರು,
ತಾ. 2—11—1948.

ಮಂಜೇಶ್ವರ ಅನಂತರಾವ್.



# ಸಮರ್ಪಣೆ

ಕೆಲವು ಭಾವಗಳೆನ್ನ ಮತಿಯೊಳಗೆ ತಾವಾಗಿ
  ನೆಲಸಿ ಕಾಲಕ್ರಮದೆ ಮೊಳೆತು ಫಲಿಸಿದುವು;
ಬಲ್ಲಿದರು ನಮ್ಮವರು ಮೇಣನ್ನಿಗರು ಬರೆದ
  ಸೊಲ್ಲುಗಳು ಹಲವೆನ್ನ ನೆನಹಿಗೊದಗಿದುವು.
ಪೊಡವಿಯೊಳಗಾವುದುಂ ಪೊಸತಿಲ್ಲವೆಂದು ನಾ
  ಣ್ನುಡಿಯಿರಲ್ಕೆಂತು ಪೊಸತಿರ್ಪುದಿದರೊಳಗೆ?
ಬಿದಿಯಾಟದಲಿ ಮನದೆ ಕೆಯ್ಗೆ ಬಂದಂತೆ ಬರೆ
  ದುದನೀಗ ಕನ್ನಡಮ್ಮನ ಪಾದಗಳಿಗೆ
ಹಲವೆಡೆಗಳಿಂ ವಸ್ತುಗಳ ಸಂಚಯದೆ ಗೆಯ್ದು
  ಕಲಸುಮೇಲೋಗರವನರ್ಪಿಸುವೆನಿದನು:
ಉಪ್ಪೊ – ಕಾರವೊ – ಹುಳಿಯೊ – ಸಪ್ಪೆಯೋ? ತಪ್ಪೆಣಿಸ
  ದೊಪ್ಪಿಕೊಳ್ಳಳೆ ತಾಯಿ ಹಸುಳೆಯಿೀವುದನು?



# ಅನುಕ್ರಮಣಿಕೆ

## ೧. ಜೋಗುಳ ಹಾಡು

ಜೋಗುಳವನು ಪಾಡಿ ಲಾಲಿಪೆ—ಜೋ ಜೋ ।
ತೂಗುವೆ ತೊಟ್ಟಿಲ, ಮಲಗಿರು—ಜೋ ಜೋ ॥ ಪಲ್ಲವಿ ॥

ಸುಮಲತೆಗಳ ಪರಿಮಳವ ಬಿತ್ತರಿಸಿ ।
ಕಮಲದ ಕೋಮಲ ಗಂಧವ ಬೆರಸಿ ॥
ಮಂದಮಾರುತವು ಬೀಸುತ್ತಿರಲಿನಿಸು ।
ತಂದೆ, ತಂದಿಹೆನೊಂದನಿಗೊ ಮುದ್ದು ಕನಸು ॥ ೧ ॥

ಮೊದಲೆವೆಗಳನು ಮುಕುಳಿಸೆನ್ನ ಸಿರಿಯೆ ।
ತೊದಲನ್ನು ನಿಲ್ಲಿಸೆನ್ನಯ ಹೊನ್ನ ಮರಿಯೆ ॥
ಸದ್ದು ಮಾಡಲು ಬೇಡ, ನೀ ಶಾಂತನೆನಿಸು ।
ಕದ್ದು ತಂದಿಹೆನೊಂದನಿಗೊ ಮುದ್ದು ಕನಸು ॥ ೨ ॥

ರವಿ ಮುಳುಗಿಹನು, ಕಂದಿತು ಸಂಜೆಗೆಂಪು ।
ಸವಿಯಾಗಿ ಕಾಂಬುದು ಚಂದ್ರನ ಸೊಂಪು ॥
ನೊಂದಿಸು ನಿನ್ನಯ ಮಾಯೆಯ ಮುನಿಸು ।
ತಂದೆನಿಗೋ ಚಿಕ್ಕ ಬಲು ಮುದ್ದು ಕನಸು ॥ ೩ ॥

ತಾತನೆ, ಸಮಯವನೆಂದುಂ ಹರಿಸದೆ ।
ಜಾತಿವಿಜಾತಿಯೆನದೆ, ಧರ್ಮಯಶದೆ ॥
ವಿನಿಯೋಗಿಸುತ ಬಲು ಸಾಸಿಗನೆನಿಸು ।
ಜನುಮವೆಂಬುದೆ ಪುಟ್ಟ ಬಲು ಮುದ್ದು ಕನಸು ॥ ೪ ॥

ಮಲಗು, ವಿಶ್ರಮಿಸೆನ್ನ ಮೋಹದ ಗೊಂಬೆ ।
ಮಲಗು, ಗಲ್ಲವನೊತ್ತಿ ನಾ ಬೇಡಿಕೊಂಬೆ ॥
ಪ್ರಿಯ ಬಾಲ, ಕೊಳಲ ಗೋವಳನನು ನೆನೆಸು ।
ದಯಪಾಲಿಸುವನಾತ ಬಲು ಮುದ್ದು ಕನಸು ॥ ೫ ॥

ತನುಮನಧನವನರ್ಪಿಸಿ ಮೋದದಿಂದಾ ।
ಜನನೀಭೂಮಿಯ ಸೇವೆಯನು ಮಾಡು, ಕಂದಾ ॥
ಭರತಪುತ್ರರ ಮೈಮೆ ಮನಸಿನೊಳೆಣಿಸು ।
ತ್ರಿರುವುದಾಗಲಿ ನಿನ್ನ ಎಚ್ಚರಗನಸು ॥ ೬ ॥

## ೨. ದೈವಾನುಗ್ರಹ

ಅಂದು ದಿವಸ ವಾರಣಸಿಯೊ ।
ಳೊಂದು ದೇಗುಲದಲಿ ಗಗನ ।
ದಿಂದ ಬಿದ್ದಿತೊಂದು ಶುದ್ಧ ಕನಕಪಾತ್ರವು ॥
ಬಂದು ನೋಡಲದರ ಮೇಲಿ ।
ಗಿಂದುಧರನು ಮೆಚ್ಚಿ ಕಳುಹಿ ।
ದೊಂದು ದಾನಮತಿ ದಯಾಳುಗೆಂದು ಕಂಡರು ॥ ೧

ಒಡನೆ ವಿಪ್ರರಲ್ಲಿ ಕೂಡಿ ।
ಗಡಣ ಗಡಣವಾಗುತೆಲ್ಲ ।
ಕಡೆಗೆ ಪೋಗಿ ಸಾರಿಸಿದರು—ಬಂದು ಸರ್ವರು ॥
ಪೊಡವಿಯೊಳಗೆ ಗೆಯ್ದುದನ್ನು ।
ಬಿಡದೆ ಪೇಳೆ, ಪಾತ್ರವನ್ನು ।
ಕೊಡುವುದಾರಿಗೆಂದು ನಿರ್ಧರಿಸುವೆವೆನ್ನುತ ॥ ೨

ಕನಕಪಾತ್ರದಾ ವಿಷಯವು ।
ಘನದೆ ಮಿಂಚು ಸರಿಯುವಂತೆ ।
ಜನರ ಕಿವಿಗೆ ವೇಗದಿಂದ ಪೋಗಿ ಮುಟ್ಟಲು ॥
ಧನದ, ದಿವ್ಯಪುರುಷ, ಶಾಸ್ತ್ರಿ ।
ವಿನುತಯೋಗಿ, ಪರಮ ಹಂಸ ।
ರೆನಿಸಿದವರು ನುಗ್ಗಿನುಗ್ಗಿ ಬಂದರೆಲ್ಲರು ॥ ೩

ಮಹದುಪಕೃತಿ, ಪುಣ್ಯಕಾರ್ಯ ।
ಬಹಳ ದಾನಗಳನು ಗೆಯ್ದು ।
ಮಹಿಯೊಳು ಪ್ರಸಿದ್ಧರೆನಿಸಿದವರು ಹಲವರು ॥

ಶಹರು ನಾಡಿನಿಂದ ಬರಲು ।
ವಹಿಸಿ ಶಾಂತಭಾವವನ್ನು ।
ಗಹನದರ್ಶಿಯೆನಿಪರಾಲಿಸಿದರು ಪೇಳ್ದುದಂ ॥ ೪ ॥

ವರುಷವೊಂದು ಸರಿದುದಿಂತು ।
ನೆರೆದ ಸಭಿಕರೆಲ್ಲರೊರೆದ ।
ಸುರರ ಮೆಚ್ಚಿನೆನಿಪ ಕೆಲಸಗಳನು ಕೇಳುತ ॥
ಅರಿತು ಸಕಲರರ್ಹತೆಯನು ।
ಕರೆಯಿರೆಂದರೊಮ್ಮೆ ಕೊನೆಗೆ ।
ಪರರಿಗಾಗಿ ಸ್ವಾಸ್ತಿಯನ್ನು ಹಂಚಿದೊರ್ವನಂ ॥ ೫ ॥

ಆ ಮಹಾನುಭಾವನಾಗ ।
ರೋಮಹರ್ಷವಾಗೆ ನಡೆದು ।
ತಾಮಸವನು ಗೆಯ್ಯದಂತೆ ಬಂದು ಮುಂದಕೆ ॥
ರಾಮರಾಮ! ಮುಟ್ಟಿದಾಗ ।
ಧಾಮದಿಂದ ಮೆರೆಯುತಿರ್ದ ।
ಹೇಮಪಾತ್ರವೆಂಬುದೇನು ಸೀಸವಾದುದು ॥ ೬ ॥

ಅಂತು ಕನಕಮಳಿಯಲವರು ।
ನಿಂತು ಸ್ತಬ್ಧರಾಗಿ ನೋಡೆ ।
ಚಿಂತೆಯಿಂದ ಪಾಪಿಯದನು ನೆಲಕೆ ಬಿಸುಡಲು ॥
ಸಂತಸದಲಿ ಹಾಸ್ಯಮುಖವ ।
ನಾಂತವೊಲಾ ಶಿವನ ಮೆಚ್ಚು ।
ಕಾಂತಿಯಿಂದ ಮೊದಲಿನಂತೆ ಚಿನ್ನಮಾದುದು ॥ ೭ ॥

ಸರಿದು ಪೋದುದಿನ್ನುವೊಂದು ।
ವರುಷವಿಂತು ದೇಗುಲದಲಿ ।
ನೆರೆದ ಸಭಿಕರಿಂದ ಕೇಳ್ದು ಪಲವು ಕಥೆಗಳಂ ॥
ತರತರಹದ ಪುರುಷರನ್ನು ।
ಕರೆದು ಪಾತ್ರೆಯನ್ನು ಕೊಟ್ಟು ।
ಹರನು ಮೆಚ್ಚದಿರಲು ಮರಳಿ ಮರಳಿ ನೋಳ್ಪರು ॥ ೮ ॥

ಹೊರಗಡೆಯಲಿ ಕದದ ಮುಂದೆ ।
ತಿರುಗಿ ತಿರುಗಿ ದಣಿದು ದಣಿದು ।
ಕುರುಡ ಕಿವುಡ ಕುಂಟ ಮೂಗರೆಲ್ಲರಿರ್ದರು ॥
ವರ ಕನಕವ ಪಡೆಯಲೆಂದು ।
ಬರುವ ಸತ್ಪುರುಷರ ಮನವು ।
ಕರಗಿ ಬೇಡುವುದನು ದಯೆಯೊಳೀವರೆನ್ನುತ ॥ ೯ ॥

ಕೂಳನುಣದೆ ಹಸಿದು ಹಸಿದು ।
ಕೇಳಿದುದಕೆ ಕೊಟ್ಟರು ಕರು ।
ಣಾಳುಗಳು ತಿರುಕರಿಗೆಲ್ಲ ಮಳೆಯಗರೆವವೋಲ್ ॥
ಚೀಲದಿಂದ ನಾಣ್ಯಗಳನು ।
ಬೀಳಿಸಿದೊಡಮೇನು ಫಲ? ವಿ ।
ಶಾಲಭೂತದಯೆಯೊಳಾರ್ದ್ರರಾಗದಿರ್ದರು ॥ ೧೦ ॥

ಕಳೆದುದೊಂದು ವರುಷಮಿನ್ನು ।
ಪೊಳಲೊಳಿರದೆ ಸಾಂಬಶಿವನು ।
ಕಳುಹಿಸಿರ್ದ ಪಾತ್ರೆಯನ್ನು ಪಡೆವ ಯೋಗ್ಯರು ॥
ಬಳಿಗೆ ಬಂದು ಮುಟ್ಟಿದಾಗ ।
ಗಳಿಗೆಯೊಳಗೆ ಹೊನ್ನಿಗಿರ್ದ ।
ಹೊಳಪು ಮಾಸಿ ಕೀಳು ಸೀಸವಾಗುತಿರ್ದುದು ॥ ೧೧ ॥

ಇರಲು ದೇವದಾನವಿಂತು ।
ಹರಕೆಯೊಂದ ತೀರಿಸಲ್ಕೆ ।
ಬರುತಲಿರ್ದನೊರ್ವ ಸಾಧು ರೈತನಲ್ಲಿಗೆ ॥
ವರ ಕನಕವು ದೊರೆಯುವುದನು ।
ಕುರಿತು ನಡೆವುವೆಂದು ಸಭೆಗ ।
ಳರಿಯದಿರಲದವನಿಗಂದು ಭಕ್ತಿಯಿಂದಲಿ ॥ ೧೨ ॥

ವಿನಯದಿಂದ ಬರುತಿರಲ್ಕ ।
ವನತರಾಗಿ ಬೇಡುತಾರ್ತ ।
ಧ್ವನಿಯ ಗೆಯ್ದು ನರಳುತಿಹರ ಕಂಡನೆಲ್ಲರಂ ॥

ತನುವು ರೋಮಹರ್ಷವಾಗೆ ।
ಮನವು ಕರಗಲಧಿಕವಾಗಿ ।
ಕನಿಕರದಲಿ ಕಂಬನಿಗಳು ಸುರಿದುವುಕ್ಕುತ ॥ ೧೩ ॥

ಅಲ್ಲಿ ಕದದ ಮುಂಗಡೆಯಲಿ ।
ತಲ್ಲಣಿಸುತ ಕೆಯ್ಯ ಚಾಚು ।
ತೆಲ್ಲರವನ ತ್ಯಜಿಸಲಿರ್ದನೊರ್ವನಂಧನು ॥
ಕಲ್ಲು ಕರಗುವಂತೆ ಚಿತ್ತ ।
ದಲ್ಲಿ ತಪಿಸುತಿರಲು ಪಾಪಿ ।
ನಿಲ್ಲದಲ್ಲಿ ಮುಂದೆ ಪೋಪುದೆಂತು ರೈತನು ॥ ೧೪ ॥

ಉದಿತವಾಗೆ ಪ್ರೇಮರಸವು ।
ಹೃದಯದೊಳಗೆ ದೃಷ್ಟಿರಹಿತ ।
ವದನವನ್ನು ನೋಡುತವನು ಪಿಡಿದು ಕೆಯ್ಗಳಂ ॥
ಮೃದು ತರದಲಿ, ಮೋಹದನುಜ ।
ಮುದದಿ ಸಹಿಸು ಬಂದುದನ್ನು ।
ಸದಯನಲ್ತೆ, ಸಖನೆ, ದೇವದೇವನೆಂದನು ॥ ೧೫ ॥

ಸ್ಮರಿಸಿ ದಿವ್ಯ ನಾಮವನ್ನು ।
ಹರಿಸಿ ಮನದ ಚಿಂತೆಯನ್ನು ।
ತಿರುಗಿ ಮತ್ತೆ ದೇಗುಲದೊಳಗಡೆಗೆ ತೆರಳುತ ॥
ವರ ಕನಕವ ಪಡೆಯಲೆಂದು ।
ನೆರೆದು ಛಲದೆ ವಾದಿಸುತಿಹ ।
ಪುರುಷರೆಲ್ಲರಿರ್ದ ಕಡೆಗೆ ಮುಂದರಿಸಿದನು ॥ ೧೬ ॥

ಜೀವರಾಶಿಗೆಲ್ಲ ಗೆಯ್ದು ।
ಗೈವುತಿರ್ದ ಸುಕೃತವನ್ನು ।
ದೇವದಾನವನು ಪಡೆಯಲು ತಾವೆ ಅರ್ಹರು ॥
ತಾವೆಯೆನ್ನಲವನಸಹ್ಯ ।
ಭಾವದಿಂದ ಹಿಂತಿರುಗಲು ।
ದೈವವಶದೆ ವಿಪ್ರರವನ ನೋಡಿ ಕರೆದರು ॥ ೧೭ ॥

ಬಂದು ರೈತನಾಗ ವಿನಯ ।
ದಿಂದ ಕೆಯ್ಯ ಚಾಚಿ ಮನದ ।
ಸಂದೆಗದಲಿ ಪೇಳಿದಂತೆ ಮುಟ್ಟಿ ತೆಗೆಯಲು ॥
ಪೊಂದುತೊಡನೆ ಅಧಿಕ ತೇಜ ।
ವಂ ದಿನಪನವೋಲ್ಮೆರೆದುದು ।
ಕುಂದಣಮದು ಸಭಿಕರೆಲ್ಲ ಬೆರಗುಗೊಳ್ಳಲು ॥ ೧೮

ಮಗನೆ, ಹರುಷಿಸೆಂದರಾಗ ।
ಗಗನದಿಂದ ಬಿದ್ದ ದೇವ ।
ರುಗಳು ಕಳುಹಿಸಿರುವ ಮೆಚ್ಚು ನಿನ್ನದಾದುದು ॥
ಅಗಣಿತವಹ ಸುಕೃತವನ್ನು ।
ಜಗದಿ ಗೆಯ್ದರಿಲ್ಲ ಮಿನ್ನು ।
ಸುಗುಣಶಾಲಿ ನೀನೆ ಭಳಿರೆ ಭಳಿರೆಯೆಂದರು ॥ ೧೯ ॥

ಎನಲು ನಾಣ್ಚಿ ರೈತನಾಗ ।
ತನಗಿದಲ್ಲವೆಂದು ಪೋಗು ।
ತನುಜ, ನಿನಗಿದೆಂದು ಹೊರಗೆ ಕುರುಡಗೀಯುತ ॥
ವಿನಯದಿಂದನಂತಮಹಿಮ ।
ನನು ಮನದಲಿ ಕರೆದು ನಂಬಿ ।
ನೆನೆದು ಸೊಗದ ಕಂಬನಿಗಳ ಸುರಿಸುತಿರ್ದನು ॥ ೨೦

---

## ೩. ಸುಖಜೀವನ

೧. ಬಳಸುತುಣುತಿರೆ ದಾಯವಸು ನೆರೆ
ಉಳಿದು ತನ್ನಯ ಮನೆಯಲಿ
ತಳೆದು ತೃಪ್ತಿಯ ಬಾಳ ವೇಳೆಯ
ಕಳೆವನೇ ಸುಖಿ ಮನುಜನೈ.

೨. ಹಸುವು ಹಾಲನು ಹೊಲವು ಕೂಳನು
ಹಸನು ತೊಡಿಗೆಯ ಮಂದೆಯೂ
ಬಿಸಿಲೊಳಾಶ್ರಯವಿತ್ತು ತರುಚಯ
ಮೆಸೆಯುತಿರೆ ಸುಖಿ ಮನುಜನೈ.

೩. ಬಗೆಯ ಶಾಂತತೆಯೊಡಲ ಸ್ವಸ್ಥತೆ
ಹಗಲ ನೆಮ್ಮದಿಯಿಂದಲಿ
ದುಗುಡವಿಲ್ಲದೆ ದಿನವ ತೋಷದೆ
ಮುಗಿಪನೇ ಸುಖಿ ಮನುಜನೈ

೪. ಇರುಳು ನಿದ್ದೆಯ ಪಡೆದು ವಿದ್ಯೆಯ
ದೊರೆತ ವಿಶ್ರಮದೊಂದಿಗೆ
ಬೆರೆಸಿ ಯೋಗದೆ ದುಡಿದ ಭೋಗದೆ
ಮೆರೆವನೇ ಸುಖಿ ಮನುಜನೈ.

೫. ತಿಳಿಯದಂತೆಯೆ ಕಾಣದಂತೆಯೆ
ಅಳುವ ಬಂಧುಗಳಿಲ್ಲದೆ
ಅಳಲು ತಾಗದೆ ಸಾನುರಾಗದೆ
ಅಳಿವನೇ ಸುಖಿ ಮನುಜನೈ.

## ೪. ಮುಗುವಿನ ನಗು

೧. ಜಗದೊಳೆಲ್ಲವ ಮಿಗಿಸಿ ಮೆರೆಯುವ
ನಗುವೆ ಲೇಸಲೆ ಮಕ್ಕಳಾ?
ಹಗಲಿರುಳು ಬಲು ಸೊಗಸಿನಿಂದಲು
ನಗಿಸೊ, ದೇವರೆ, ಮಕ್ಕಳಾ!

೨. ರವಿಯ ಕಿರಣದ ಸೊಂಪಿಗಿಂತಲು
ಕವಿಯ ಗೀತಕ್ಕಿಂತಲೂ
ಕುವರ ಕುವರಿಯರೊಸೆದು ತೋರುವ
ಸವಿಯ ನಗು ಬಹು ಸವಿಯಲಾ!

೩. ಮರದ ಕೊಂಬೆಯ ಕರಿಯ ಕೋಗಿಲೆ
ಇರದೆ ಕೂಕೂ ಸ್ವರವನು
ಸುರಿದು ಗಂಡನ ಕರೆಯುತಿದ್ದರು
ಸರಸವಲೆ ನಗು ಮಕ್ಕಳಾ?

೪. ಉದಯಕಾಲದ ಪದುಳದಂದದಿ
ತೊದಲಿನಂದದಿ ಹಕ್ಕಿಯಾ
ಸದಯದೇವರ ಕರುಣೆಯಂದದಿ
ಮಧುರವಲೆ ನಗು ಮಕ್ಕಳಾ!

೫. ಉಳಿಯಲಾರದು ಅಳಲದೆಂಬುದು
ಸುಳಿಯಲಾರದು ದುಃಖವು
ಕಳಕಳಿಸುವುದು ಸಗ್ಗದೊಲ್ಮನೆ
ಬೆಳಬೆಳಗೆ ನಗು ಮಕ್ಕಳಾ!

೬. ನಾನು ದೀನನು; ನೀನು ದಾನಿ, ಮ
ಹಾನುಭಾವನೆ, ದೇವನೇ!
ಏನ ಹೇಳಲಿ? ಏನ ಕೇಳಲಿ?
ಸಾನುರಾಗದೆ ಪಾಲಿಸು!

೭. ಮುರಲಿರಂಗನ ತೆರೆದ ಮೊಗ ಸವಿ
ಗರೆದವೋಲ್ಲೋಕದಲಿ,
ನಿರುತ ಮಕ್ಕಳ ನಗುವ ಕೇಳುವ
ವರವ ಪಾಲಿಸು ದಯದಲಿ!

---

## ೫. ಭೂಮಾತೆ

ದೇವಿ ಭಾರತಭೂಮಿ ವರದೆ ಶರ್ವಾಣಿ ।
ದೇವಮಾನವವಿನುತೆ ಸರ್ವರಲಿ ರಾಣಿ ॥
ಭೂವಲಯದಲಿ ನಿನ್ನ ಸರಿಯ ಕಂಡರಿಯೆ ।
ಭಾವಿಸಲು ನಿನ್ನ ಸಮರನ್ನು ಕೇಳ್ದರಿಯೆ ॥ ೧ ॥

ಅಮಿತ ನಗರಾಭರಣಗಳನು ಧರಿಸಿಹಳು ।
ವಿಮಲ ಸಾಗರದೊಳಗೆ ತೂಗಿ ಮಲಗಿಹಳು ॥
ಹಿಮಗಿರಿಯ ಶಿಖರದಲಿ ಜಾನಿಸುತಿರುವಳು ।
ಯಮುನೆಗಂಗೆಯರ ಶುಭ ತೀರ್ಥ ಕುಡಿಸುವಳು ॥ ೨ ॥

ಕೋವಿದರು ವಿದ್ಯೆಯಲಿ ಪಡೆವ ಮೋದದಲಿ ।
ಜೀವಪರಮಾತ್ಮರಾ ಭೇದವಾದದಲಿ ॥
ತಾವರೆಯ ಕೋಮಲ ಸುವಾಸನೆಯೊಳಿಹಳು ।
ಮಾವಿನಾ ಸವಿಯೊಳತಿ ಮಧುರವಾಗಿಹಳು ॥ ೩ ॥

ಕೋಗಿಲೆಯ ಕಂಠಕಲಕಲದಿ ಕೂಡಿಹಳು ।
ಸೋಗೆಯಾ ವರ್ಣವೈಚಿತ್ರ್ಯದೊಳಗಿಹಳು ॥
ಯೋಗಿಗಳ ಯೋಗದಲಿ ಗೂಢಳಾಗುವಳು ।
ಭೋಗಿಗಳ ಭೋಗದಲಿ ಬೆರೆಯುತಾಡುವಳು ॥ ೪ ॥

ಹಾರುವರ ಮಂತ್ರರವದಲಿ ಕೇಳಿಸುವಳು ।
ವೀರರೆದೆಧಮನಿಗಳೊಳಾಡಿ ಹರಿಯುವಳು ॥
ನೀರೆಯರು ಹಾಡುತಿರೆ ಸವಿಜೋಗುಳವನು ।
ತೋರುವಳು ಕಲಿಸುವಳು ದೇಶಪ್ರೇಮವನು ॥ ೫ ॥

ನೀನಲ್ತೆ ನಮ್ಮಯಾ ದೇಹಗಳ ಸತ್ವಂ ।
ನೀನಲ್ತೆ ಮತಧರ್ಮಸಿದ್ಧಾಂತ ತತ್ತ್ವಂ ॥
ನೀನಲ್ತೆ ದೇಗುಲದಿ ಪೂಜಿಸುವ ಮಾತೆ ।
ನೀನಲ್ತೆ ಲೋಕಸನ್ಮಾನಿತೆ ಪುನೀತೆ ॥ ೬

ಉನ್ನತ ದ್ರವ್ಯವನು ಸೇರಿಸಿಡಲಾರೆ ।
ಚನ್ನಿಗರ ರೀತಿಯಲಿ ಸಿಂಗರಿಸಲಾರೆ ॥
ಚಿನ್ನದಾ ಬಾವಲಿಗಳನು ತೊಡಿಸಲಾರೆ ।
ರನ್ನಗಳ ಸರಗಳನು ತಂದೀಯಲಾರೆ ॥ ೭

ಉದುರಿಸುತ ಮನದ ಬಲು ಸಂದೆಗವ ನಿನ್ನ ।
ಪದದಡಿಯೊಳರ್ಪಿಸುವೆ ದೇಹವಿದನೆನ್ನ ॥
ಹೃದಯಾಲಯದಿ ನಿನ್ನ ಮೂರ್ತಿಯನಿರಿಸುವೆ ।
ಮುದದಿಂದ ಕಾಲಕಾಲದೊಳಾದರಿಸುವೆ ॥ ೮

ಇನಿಸು ಚೈತನ್ಯದಿಂದಾಡುತಿರೆ ಜೀವಂ ।
ದಿನದಿನಕೆ ನೆನೆನೆನೆದು ಸೇವಿಪೆನು; ದೇವಂ ॥
ತನುವನಾರೋಗ್ಯಭಾಗ್ಯವನಿತ್ತು ಕಾಯೆ ।
ಜನುಮಮೆಂಬೀವರವು ನಿನಗಲ್ತೆ ತಾಯೆ ॥ ೯

ಸನ್ನುತ ಸುವಾಸಿನಿಯ ಪದವಿಯನು ಸೇರಿ ।
ಪನ್ನತಿಕೆಯನು ನ್ಯಾಯನೀತಿಯಲಿ ಬೀರಿ ॥
ಮನ್ನಣೆಯ ದಾರಿಯನು ನಡತೆಯಲಿ ತೋರಿ ।
ತನ್ನ ಮಂಗಲ ಕೀರ್ತಿವಾರ್ತೆಯನು ಸಾರಿ ॥ ೧೦

ಮುಗಿಲುಗಳನೊತ್ತರಿಸಿ ರವಿಯು ನಗುವಂತೆ ।
ಮುಗಿಯೆ ತನ್ನಯ ಚಿಂತೆ, ಮೆರೆದಂತೆ ಪಿಂತೆ ॥
ಜಗದಿ ನಳನಳಿಸುವಳು ಭೂಜನನಿ ನಿತ್ಯಂ ।
ಮೃಗಪಶುಗಳಲ್ಲ ನಾವ್ ಮಾನವರೆ ಸತ್ಯಂ ॥ ೧೧

ಭರತಸುತನಾಮವನು ಜನನದಿಂ ತಳೆದು ।
ಹರುಷದಿಂ ಜೀವವನು ನಿನಗಾಗಿ ಕಳೆದು ॥
ಮರಣದನಕಂ ನಿನ್ನ ದಾಸನಹುದೆಂಬಾ ।
ವರವ ಪಾಲಿಸು ಭೂಮಿದೇವಿ ಜಗದಂಬಾ ॥ ೧೨

## ೬. ಮುಗಿಲು

೧. ಮುಗಿಲೆ, ಮುಗಿಲೇ, ನೀಲ ಮುಗಿಲೇ
ಗಗನದಲಿ ಸಂಚಲಿಸುತ,
ಝುಗಿಸಿ, ಗದರಿಸಿ, ನಮ್ಮ ಬೆದರಿಸಿ,
ಜಗದೊಳೇನಂ ಗೆಯ್ವೆಯೈ?—

೨. ಬಿಸಿಲು ಕಾಲದ ಬೇಗೆ ತಾಳಿದ
ಕುಸುಮಗಳು ಬಾಯಾರಲು
ಹಸನು ಹನಿಗಳ ಜಲಧಿನದಿಗಳ
ದೆಸೆಯೊಳೀಂಟುತ ಸುರಿವೆನೈ.

೩. ಎಲೆಗಳೆಲ್ಲವು, ಬರೆ ಪರಾಹ್ಣವು,
ಬಳಲಿ ತೂಕಡಿಸುತ್ತಿರೆ,
ನೆಲದ ತಾಪವನಿರದೆ ತಣಿಸುವ
ನೆಳಲ ನೀಡುತ ಕಾಯ್ವೆನೈ.

೪. ತಿರೆಯ ತೊಡೆಯಲಿ ಮೋಲ್ಮೆಯಿಂದಲಿ
ಒರಗೆ ಚಿಗುರುಗಳೆಲ್ಲವು,
ಗರಿಯ ಕೆದರಿಸಿ, ಹಿಮವನುದುರಿಸಿ,
ಕರೆಯುತೆಚ್ಚರ ಮಾಳ್ಪೆನೈ.

೫. ಇಳಿಸಿ ಕಲ್ಮಳೆಧಾರೆಯಂ, ಬೆಳೆ
ಬೆಳೆವ ತಪ್ಪಲ ತಳವನು
ಬಿಳುಪನೇರಿಸಿ, ಹಿಮವ ಕರಗಿಸಿ,
ಸುಳಿದು ಗುಡುಗಿಸಿ ನಗುವೆನೈ.

೬. ಗಿರಿಯ ಮೇಲಿನ ನಿಬಿಡ ಕಾನನ
ತರುಗಳೆಲ್ಲವು ಗೋಳಿಡೆ,
ಇರುವ ವೇಳೆಯ ಬಿರುಸು ಗಾಳಿಯ
ಕರಗಳಲ್ಲಿಯೆ ಕಳೆವೆನೈ.

೭. ಚೆನ್ನ ಗಗನದೊಳಿರ್ದ ಭವನದ
ಉನ್ನತದ ಗೋಪುರದಲಿ
ಎನ್ನ ಸಾರಥಿ ಸಿಡಿಲಮೂರುತಿ
ಮುನ್ನಮೇ ಕುಳಿತಿರುವನೈ.

೮. ಸಾರಥಿಯ ಬಲದಿಂದ ನಾ ನೆಲ
ನೀರುಗಳ ಮೇಲಿಂದಲೇ
ದೂರದಿಂ ಪಲ ದೇಶಪುರಗಳ
ಸಾರಿ ತವಕದೆ ಪೋಪೆನೈ.

೯. ಗುಡುಗುರಾಜನು ಕೆರಳುತಿರುವನು
ಅಡಿಯ ಬೆಟ್ಟದ ಗವಿಯಲಿ;
ಕೆಡುಕ ತೊಡಗಿಸಲಿಳೆಯನುಡುಗಿಸ
ಲಡಗಿ ನಡುಗಿಸಿ ನಗುವನೈ.

೧೦. ಏನ ಮಾಡುವೆನೆಂದು ಕೇಳುವೆ
ನಾನು ಗಗನದ ತಳದಲಿ:
ಭಾನು ಚಂದ್ರರನಡಗಿಸುತ ವರ
ಬಾನ ನಸುನಗೆಗೊಲಿವೆನೈ.

೧೧. ತೋರೆ ಕಾಮನ ಬಿಲ್ಲ ಸೊಗಸಿನ
ತೋರಣಮುದಾಕಾಶದಿ,
ವೀರಮೂರುತಿ, ವಿಜಯದಾರತಿ
ತೋರಿಸಲು, ಬರುವಂತೆಯೈ.

೧೨. ಸಾರಿ ಬರುವೆನು, ನೀರ ಸುರಿವೆನು;
ಭಾರಿ ಗಾಳಿಯ ಬಾವಟೆ
ಹಾರೆ, ಮೊಳಗಿಸಿ, ಮಿಂಚ ಬೆಳಗಿಸಿ,
ತೇರ ನಡೆಯಿಸಿ ಸರಿವೆನೈ.

೧೩. ಬಾಲೆ ನಾನೆಲೆ ನೆಲಜಲದ; ಸಲೆ
ಲೀಲೆಯಾಡುವೆ ಗಗನದಿ;
ಜಾಲ ತೋರುವೆನಡಗಿ ಸಾರುವೆ;
ಕಾಲಮೆಂಬುದನರಿಯೆನೈ.

೧೪. ಇಳೆಯ ಸೀಳುವೆ; ಕಡಲ ಸೇರುವೆ;
ತಿಳಿಯದಂತೆಯೆ ನಿಮ್ಮಗೆ
ತಳೆದು ಕಾಣದ ಬಗೆಯ, ಗಗನದ
ಬಳಿಯನೆಳಸುತ ಪಾರ್ವನೈ.

೧೫. ಮಗುವೆ, ಮಗುವೇ, ಮುದ್ದು ಮಗುವೇ,
ಮುಗಿಲ ಚರಿತೆಯ ಕೇಳ್ದೆಯೈ;
ಮೊಗವ ಕಂದಿಸಿ, ಮಾತ ನಿಲ್ಲಿಸಿ,
ದಿಗಿಲುಗೊಳ್ಳಲು ಬೇಡೆಲೈ.

---

## ೭. ಮೋಹದ ದಾಹ

೧. ಇರಿಸಿದರು ವೀರನಾ ದೇಹವನು ತಂದು;
ವರ ಸತಿಯು ನೋಡಿ ಸುಮ್ಮನೆ ಕುಳಿತಳಂದು;
ಬೆರಗಾಗಿ ದಾಸಿಯರು ನುಡಿದರೆಯ್ತಂದು—
"ಮರಣ ದಿಟ, ಬಾರದಿರೆ ಕಂಬನಿಯ ಬಿಂದು".

೨. ಹೊಗಳಿದರು ನಾಯಕನ; ಕ್ಷತ್ರಿಯರೊಳೆಂದು
ಗಗನಮಣಿ, ಗಂಡುಗಲಿ, ವಿಕ್ರಮದ ಸಿಂಧು,
ಜಗದಿ ಶರಣಾಗತರ ಬಂಧು ದಿಟವೆಂದು.
ಮೃಗನಯನೆ ಕೇಳಿ ಸುಮ್ಮನೆ ಕುಳಿತಳಂದು.

೩. ರಮಣಿಯೊರ್ವಳು ಕಳ್ಳ ಹಜ್ಜೆಯಲಿ ಬಂದು
ನಿಮಿಷದಲಿ ವೀರ ಮೂರ್ತಿಯ ಬಳಿಯೆ ನಿಂದು,
ರಮಣನಾ ಮೋರೆಮುಸುಕನು ತೆಗೆದಳಂದು.
ಶಮನಿಸದು, ಗಮನಿಸದು ಕಾಂತೆಯ ಮುಖೇಂದು.

೪. ಮಾಸವರನರಿತ ಮುದುಕಿಯು ಮಗುವ ತಂದು
ಮೌನದಿಂದಿರಿಸಿದಳು ತಾಯ್ತೊಡೆಯೊಳಂದು—
ಮಾನಿನಿಯು ಕರಗಿದಳು ಮನದಿ ನೆರೆನೊಂದು,
"ನಾನುಳಿವೆ, ಮುದ್ದು ಸಿರಿ, ನಿನಗಾಗಿ" ಎಂದು!

---

## ೮. ಸುಖದುಃಖ

೧. ಹೊನ್ನನವನಿಗೆ ಕೊಟ್ಟು ಹಾಡ ಹೇಳಿದರು—
ಚೆನ್ನಿನಾ ಗೀತಗಳ ಪಲರು ಕೇಳಿದರು:
ತನ್ನ ಕೊಳಲನ್ನೂದಿ ಗಾಯಕನು ಸುರಿದಂ;
ಉನ್ನತಿಯ ಸಂತಸದ ಗಾನವನು ಕರೆದಂ.

೨. ಪಂಚಮದ ಮಧ್ಯಮದ ರಾಗಗಳ ಹೂಡಿ
ಹಂಚಿದನು ಸಭೆಯೊಳುಲ್ಲಾಸವನು ಮಾಡಿ,
ಮಿಂಚಿದುದು ಸವಿಸೊಗಮದಾದೊಡೇನಂದೆ
ಚಂಚಲಂ ಜಾರಿದುದು ಗೀತಗಳ ಹಿಂದೆ!

೩. ಒತ್ತಿ ಬಂದರು ಮತ್ತೆ ಹೆಮ್ಮರನ ಕೆಳಗೆ;
ಮುತ್ತಿದರು ಸಂದಣಿಸಿ, ಏಕಾಂತದೊಳಗೆ
ಸುತ್ತಲುಂ ಕಾನನದ ಕಲಕಲವು ಕಲಿಯೆ,
ಚಿತ್ತ ಚಿಂತನದೊಳಿಹ ಗಾಯಕನ ಬಳಿಯೆ.

೪. ಬಾಳಿನಲಿ ತನ್ನಯಾ ಜೀವಮದು ಕಂಡು
ತಾಳಿದಾ ಚಿಂತೆಯ ಮನದಿ ತಂದುಕೊಂಡು
ಗೋಳಿಡುವ ಗೀತವನು ಕೇಳಿದರು ನಿಂದು:
ಕೇಳಿಸುವುದಡಿಗಡಿಗದವರೆದೆಯೊಳಿಂದು!

## ೮. ಇಬ್ಬನಿಯ ಕಂಬನಿ

೧. ಆಗಸದ ಮಂಡಲದಿ ಸೊಗಸಿನಿಂ, ರವಿಯೇ,
ತೂಗಿ, ಕಿರಣಂಗಳನಿಳೆಗೆ ಕರುಣಿಸುವಿಯೇ?
ಆಗದೆನ್ನಿಂ ನಿನ್ನನೊಳಕೊಳ್ಳಲೆಂದು
ಕೂಗಿ ನೊಂದುದು ಹಿಮದ ಜಲದೊಂದು ಬಿಂದು.

೨. ಕಾಂಬೆ ಕನಸಿನಲಿ ನಿನ್ನಯ ಮೈಮೆಯನ್ನಾ;
ಹಂಬಲಿಸುತಿಹೆ ಪಡೆಯೆ ಬಿಂಬವನು ನಿನ್ನಾ;
ಅಂಬರದ ಯೋಗ್ಯತೆಯು ದೀನರಿಗೆ ಬಹುದೇ?
ಕಂಬನಿಯ ಜೀವನವೆ ನಮ್ಮ ಪಾಡಹುದೇ!

೩. ಉಕ್ಕಿ ಬಹ ಚಿಂತೆಗೂಡಿದ ಬಿಂದುವಿನ ಪಂ
ತಕ್ಕೆ ಮೆಚ್ಚುತ, ನಗುತ, ನುಡಿದನಾ ದಿನಪಂ:
ಚಿಕ್ಕವನು ನೀನೆಂಬ ದುಃಖವನು ತೊರೆಯೈ;
ಅಕ್ಕರೆಯೊಳೆನ್ನ ಮಾತನು ಕೇಳಿ ಮರೆಯೈ.

೪. ಬೆಳಗಿಸಿದೊಡಂ ಪಾರಗಾಣದ ಗಗನವಂ,
ಮಳೆಹನಿಯೊಳುಂ ತೋರ್ಪೆನೆನ್ನೀ ವದನವಂ;
ತಳತಳದ ತಳುಕಾಗಿ ನಿನ್ನ ತುಂಬಿರುತಂ
ತೊಳಗಿಸುವೆ ನಿನ್ನ ಜೀವದ ಕಳೆಯ ನಿರುತಂ!

---

## ೧೦. ಸಹಕಾರಗೀತ

ತೂಕಡಿಕೆಯನು ಕಳೆಯದೇಕೆ ಮಲಗಿಹೆ ಗೆಳೆಯ ।
ಸಾಕು ಸುತ್ತಲು ನೋಡು ಕಣ್ದೆರೆದು ನಿಂದು ॥
ಲೋಕದಲಿ ಶಿವಶಿವಾ ಸೋತೆನೆಂದೆನಿಸುವಾ ।
ಶೋಕರುತಿ ಕಿವಿಯನುಚ್ಚಳಿಸುತಿರೆ ಬಂದು ॥

ಋಣಜಾಲದಲಿ ಸಿಲುಕಿ ಹಣದುಮ್ಮಳದಿ ಕುಲುಕಿ ।
ಕ್ಷಣಕ್ಷಣಕೆ ಕಷ್ಟದಲಿ ಬಳಲಿದ್ದೈ ಬೆಂದು ॥
ದಣಿದರಿಗೆ ಕೈಯ್ಗೊಟ್ಟು ಸಹಕಾರಧ್ವಜನೆಟ್ಟು ।
ಉಣುವ ಮಾರ್ಗವ ತೋರೆ ನಾಯಕರು ಮುಂದು ॥

ಕುಗ್ಗಿ ಸಾಲವ ಕೇಳೆ ಹಿಗ್ಗುತೀವನು ನಾಳೆ ।
ಬಗ್ಗಿಪನು ನಿನ್ನ ಸಿರಮುಡಿಯನೆಳೆದೆಂದು ॥
ಹಗ್ಗವಿಲ್ಲದ ಕಟ್ಟು ಬೆತ್ತವಿಲ್ಲದ ಪೆಟ್ಟು ।
ಒಗ್ಗುವುದೆ ಈ ಗತಿಯು ಸವಿ ವಿಷವ ತಿಂದು ॥

ಕಿತ್ತು ಬಿಡು ಸಂಶಯವನಿತ್ತು ನಿನ್ನಾಶಯವ ।
ನುತ್ತುಂಗ ಸಹಕಾರಿ ಸಂಘಕೆಯ್ತಂದು ॥
ಹೊತ್ತ ಕಳೆಯಲು ಬೇಡ ಭ್ರಾಂತಿಗೊಳದಿರು ಮೂಢ ।
ಕುತ್ತುಗೊಂಡಿಹೆ ನೀನು ಬಡತನದಿ ನೊಂದು ॥

ತೆತ್ತು ಬಹ ಕೋಟಲೆಯ ಕುತ್ತಿಗೆಯ ಸಂಕಲೆಯ ।
ಕತ್ತರಿಸಿ ನಿನ್ನ ಸೆರೆ ಬಿಡಿಸಬೇಕೆಂದು ॥
ತತ್ತರಿಸೆ ಹಿಂಜರಿಯದೆತ್ತಲುಂ ಧೃತಿ ತೊರೆಯ ।
ದತ್ಯಧಿಕ ಯತ್ನಗಳ ನಡೆಸುತಿರಲೆಂದು ॥

ಸತ್ತಿತೇ ಸಾಧನೆಯು ಬತ್ತಿತೇ ರೋದನೆಯು ।
ಮತ್ತೆ ನಿನ್ನಿಂದೇನುಮಾಗದೇ ಮುಂದು ॥
ಎತ್ತ ಪೋದುದು ನಿನ್ನ ಸ್ಥೈರಣೆಯ ಬಲ ಬನ್ನ ।
ದತ್ತಣಿಂದಿಲ್ಲವೇ ಜಯಸೌಖ್ಯಸಿಂಧು ॥

ಕಳವಾದ ಮೇಲ್ನೀನು ಕಳವಳಿಸಿ ಫಲವೇನು ।
ಕಳೆದಪುದು ನಿನ್ನ ಸ್ವಾತಂತ್ರ್ಯಮಣಿಯೊಂದು ॥
ತಿಳಿತಿಳಿದಳಿವುದೇಕೆ ಕುಳಿತು ಬರಿದಳಬೇಕೆ ।
ಕಳಚಿಬಿಡು ಅಧ್ಯಾತ್ಮನಿದ್ರೆ ಮಮಬಂಧು ॥ ೭ ॥

ಎದ್ದೇಳು ಎದ್ದೇಳು ನಿದ್ದೆಗಣ್ಣನು ಕೀಳು ।
ಎದ್ದಿಹನು ಸಹಕಾರ ತತ್ತ್ವಮೆಂಬೊಂದು ॥
ಶುದ್ಧ ಭಾಸ್ಕರಭಾನು ಉದ್ಧಾರವಹೆ ನೀನು ।
ಬಿದ್ದಿರ್ಪುದೇಕೆ ಕಣ್ಕತ್ತಲೆಯೊಳಿಂದು ॥ ೮ ॥

ತಳರು ಭರತಕುಮಾರ ಕಲಿಯುಗದ ನವವೀರ ।
ಕೊಳುಗುಳದಿ ದಾರಿದ್ರ್ಯವೈರಿಯನು ಕೊಂದು ॥
ಇಳೆಯು ಶಾಂತಿಯ ತಾಳೆ ಬಳೆದು ತೃಪ್ತಿಯು ಬಾಳೆ ।
ಭಳಿರೆ ಭರತಾಂಬೆಯಾ ಸೌಭಾಗ್ಯಮಂದು ॥ ೯ ॥

---

## ೧೧. ತಾಯ್ತನದ ಕೊರಗು

ಕರಗಿ ಪೋದುದು ಮಾಂಸಮಿನಿಸಿನಿಸುಮಿಲ್ಲಂ ।
ಜ್ವರದ ಜ್ವಾಲೆಯೊಳಾರಿದುದು ನೆತ್ತರೆಲ್ಲಂ ॥
ನರಳುವಳು ಸಂದುಗಳ ಬೇನೆಯಿಂದತ್ತು ।
ಹರಣವೊಂದೇ ದೇಹದಲಿ ತೂಗುತಿತ್ತು ॥ ೧ ॥

ಅಕ್ಕರೆಯ ಮಗಳ ತಾಯ್ತಂದೆಗಳು ಕೂಡಿ ।
ಚಿಕ್ಕಂದಿನಲೆ ಕಳುಹಿದರು ಮದುವೆ ಮಾಡಿ ॥
ಪೊಕ್ಕ ಪತಿಸದನದಲಿ ಸುಖಶಾಂತಿಯಿರದೆ ।
ಸೊಕ್ಕಿ ಕುಳಿತಳು ರೋಗರಕ್ಕಸಿಯು ಶಿರದಿ ॥ ೨ ॥

ಗತಿಗೆಡಿಸುವುದು ಮಾವನಂ ದುರ್ವ್ಯಸನಮುಂ ।
ಅತಿ ಕಾಡಿಸುವಳತ್ತೆ ಸೊಸೆಯನನುದಿನಮುಂ ॥
ಪತಿಯ ನಡೆನುಡಿಗಳೊಳಗಾವಗಂ ಕೋಪಂ ।
ಸತಿಯ ಪಾಡೇನಪ್ಪುದಯ್ಯಯ್ಯೊ ಪಾಪಂ ॥ ೩ ॥

ಬಾಲೆಯಲಿ ಕುವರನನು ಪಡೆಯಬೇಕೆಂದು ।
ಲಾಲಸೆಯು ಮಿಾರೆ ಜನಿಸಿತು ಗರ್ಭವೊಂದು ॥
ಕಾಲನ ವಿನೋದವೋ ಮಾತೆಯ ವಿಷಾದಂ ।
ಬಾಲಕನು ಗರ್ಭದಲೆ ಬೀಳ್ಕೊಂಡು ಪೋದಂ ॥ ೪

ಬಾಯೆಂದು ತಂಗಿಯನು ಕರೆಯುತಿಹನಣ್ಣಂ ।
ತಾಯಿ ಬರಕೂಗುವಳವಳ ಮುದ್ದು ಪೆಣ್ಣಂ ॥
ಮಾಯೆಯಣುಗನು ನೋಡು ಗೆಯ್ವ ಕೈಸನ್ನೆ ।
ಕಾಯವನು ತೊರೆದಪುದೆ ಲೇಸಲ್ತೆ ಮಾನ್ಯೆ ॥ ೫

ಪರಿಪರಿಯ ಸಂಕಷ್ಟಗಳ ಕಂಡಳೆಲ್ಲಂ ।
ಹರುಷವನು ಚಿಂತೆಯಲಿ ಬೆರಸೆ ಮಗನಿಲ್ಲಂ ॥
ಧರಣಿಯಾ ಲಾಲಸೆಯದಿನ್ನುಳಿಯಬೇಕೆ ।
ಹರಣವೊಂದೇ ನೊಂದು ತೂಗುತಿಹುದೇಕೆ ॥ ೬

ಮೌನಶೂನ್ಯತ್ವದಲಿ ಶುಭಗೀತೆಯಂತೆ ।
ಕಾನನಾಂತರದೊಳಗೆ ಚಂದ್ರಕಳೆಯಂತೆ ॥
ಮಾನವಧ್ವಂಸದಲಿ ಜಯಲಕ್ಷ್ಮಿಯಂತೆ ।
ಮಾನಿನಿಗೆ ಮಗಳೊಂದು ಜನಿಸಿರ್ದಳಂತೆ ॥ ೭

ಓಡಿಸುವ ಮರಗುದುರೆಯಲೆ ತೃಪ್ತಿದೊರೆತು ।
ಆಡುವಾ ರಭಸದೊಳಪಾಯವನು ಮರೆತು ॥
ಕೇಡನರಿಯದ ಶಿಶುವಿಗೇನಹುದೊ ಮುಂದೆ ।
ಮೂಢ ಸಂಸಾರದೊಳಗಿದು ಚಿಂತೆಯೊಂದೆ ॥ ೮

ತಾನು ಪೋದರೆ ಮತ್ತೆ ನೋಡುವವರಿಲ್ಲ ।
ದೀನ ತಬ್ಬಿಲಿಯ ಕಾಪಾಡುವವರಿಲ್ಲ ॥
ಹಾನಿಯಿಂ ತಪ್ಪಿಸಲು ಗತಿಕಾಣೆನಲ್ಲ ।
ಏನಗೆಯ್ವುದು ಸುತೆಯನಾಥೆಯಹಳಲ್ಲ ॥ ೯

ಬರಹೇಳಿ ಕಳುಹಿದಳು ತಂದೆಯನು ತನ್ನ ।
ಮರದೆ ಪಣ್ಗಳು ಬೀಳುತೆಲೆಯುದುರಿ ಮುನ್ನ ॥
ಕೊರೆದು ಹುಳುತಿಂದು ಬೇರೊಣಗಿ ಪೋದಂದಂ ।
ಸುರಿಯೆ ಕಂಬನಿ ತಂದೆ ಬಂದಲ್ಲಿ ನಿಂದಂ ॥ ೧೦

ಗಗನವಂ ನುಂಗುವೊಲ್ ಮುಗಿಲೊಡ್ಡಿಗರೆವಾ ।
ಜಗವ ಮುಳುಗಿಸುವಂದದಲಿ ಧಾರೆಯೆರೆವಾ ।
ಮೃಗಶಿರೆಯ ಮಳೆಯಂತೆ ದೈವೇಚ್ಛೆಗೆರಗಿ ।
ಹುಗಿದ ಚಿಂತೆಯು ಹೊರಗೆ ಬಿಕ್ಕಿದುದು ಕರಗಿ ॥ ೧೧ ॥

ಅತ್ತು ಮುಗಿಸಲು ಮುಗುಳುನಗುವು ಮೊಗದೊಳಗೆ ।
ಉತ್ತರೆಯ ರವಿರಶ್ಮಿಯಂದದಲಿ ಬೆಳಗೆ ॥
ಹತ್ತಿರಕೆ ಕರೆದು ತಂದೆಯ ಯೋಚಿಸಿದಳು ।
ಉತ್ತರೋತ್ತರವನ್ನು ಕುರಿತು ಕೇಳಿದಳು ॥ ೧೨ ॥

ಅನ್ನೆಗಂ ತಾಳ್ದ ಭೀತಿಯ ಮನದಿ ತಂದು ।
ಬಿನ್ನವಿಸಿ ತಂದೆ ಪೇಳ್ದುದ ಕೇಳಿ ಮುಂದು ॥
ತನ್ನದೆಂಬುದನೆಲ್ಲವನು ಮಗಳಿಗೆಂದು ।
ಕನ್ನೆಯನುಕೂಲವನು ಸಾಧಿಸಿದಳಂದು ॥ ೧೩ ॥

ಮಗಳ ಹಿತವನು ಕುರಿತು ಮರಣಶಾಸನವು ।
ಮುಗಿದು ತಂದೆಯು ಬಾಸೆಯಿತ್ತುಬಿಡೆ ಮನವು ॥
ಜಗದಾಸೆಯನು ತೊರೆದು ತಿರುಗಿದುದು ಮತ್ತಂ ।
ನಗುವು ಮೊಗದೊಳಗೊಗೆದುದಗೊ ನೋಳ್ಪುದತ್ತಂ ॥ ೧೪ ॥

ನೋಡುವರು ಕರೆಯುವರು ಮುಟ್ಟುವರು ಮಾತಂ ।
ಆಡುವರು ಮೊರೆಯಿಟ್ಟು ಬೇಡಿ ಸಂಕೇತಂ ॥
ಮಾಡುವರು ಮಾಡೆ ಕಳುಚುವುದೆ ವಿಧಿಬಂಧಂ ।
ಓಡಿದುದು ಪ್ರಾಣವಾಯುವು ದೇಹದಿಂದಂ ॥ ೧೫ ॥

---

## ೧೨. ಸಹಕಾರ ಚತುಷ್ಟಯ

ತಾಳ ತಂಬುರಿ ಮದ್ದಳೆಯ ರಾ ।
ಗಾಳಿ ಸಹಿತ ಮುಕುಂದ ಜಯ ಗೋ ।
ಪಾಳ ಜಯಜಯವೆನುವ ಕೀರ್ತನೆ ಶ್ರವಣ ಸ್ಮರಣೆಗಳೇಂ ॥
ಹಾಳು ಜನ್ಮದ ಗೋಳನೆಲ್ಲವ ।
ಕೀಳುವಡೆ ಸಹಕಾರ ಶುಭ ಸ ।
ಮ್ಮೇಳನವು ಸಾಕಲ್ತೆ ದೇವಾರ್ಚನೆಯೊಳಿನ್ನೇನು ॥ ೧

ಪಾದಸೇವನೆ ಸಖ್ಯಮಾತ್ಮ ನಿ ।
ವೇದನೆಯ ವಂದನೆಯ ದಾಸ್ಯವ ।
ಸಾಧಿಸುವುದೇತಕ್ಕೆ ದೊರೆಯುವುದಾವ ಮುಕ್ತಿಪದಂ ॥
ಮೇದಿಯ ವ್ಯಥೆಬಾಧೆಪೀಡೆಯ ।
ವೇದನೆಯ ಪರಿಹರಿಸೆ ಸಹಕಾ ।
ರೋದಯವು ಸಾಕಲ್ತೆ ನವವಿಧಪೂಜೆಯೆಂದೊಡದೇಂ ॥ ೨

ಯಾರು ಜನ್ಮವನಿತ್ತರೆಲ್ಲಿಗೆ ।
ಸಾರುವೆವು ಜನ್ಮಾಂತ್ಯದಲಿ ನಿಜ ।
ಕಾರಣಗಳೇನಿಹವು ಸುಖದುಃಖಾದಿಗಳಿಗೆಂಬಾ ॥
ಪಾರಮಾರ್ಥವಿಚಾರವೇಂ ಸಂ ।
ಸಾರಶರಧಿಯ ದಾಂಟುವಡೆ ಸಹ ।
ಕಾರನಾವೆಯು ಸಾಲದೇ ಮತಶಾಸ್ತ್ರವಿನ್ನೇನು ॥ ೩

ತಾನು ಪರರಿಗೆ ಪರರು ತನಗೆಂ ।
ಬೀ ನಯೋಕ್ತಿಯನನುಸರಿಸಿ ಸಹ ।
ಮಾನವರನುದ್ಧರಿಪ ಬುದ್ಧಿಯು ಜನಿಸೆ ಧನ್ಯನೆಲಾ ॥
ಶ್ರೀನಿವಾಸನೆ ನಿನ್ನ ನಂಬಿದ ।
ದೀನರನು ಮೇಲೇರಿಸಲು ಸೋ ।
ಪಾನವಹ ಸಹಕಾರಿಯಾಗಿಸು ಜನ್ಮಜನ್ಮದಲಿ ॥ ೪

## ೧೩. ಸಹಕಾರ ಷಟ್ಕ

ತನಗೆಲ್ಲರೆಲ್ಲರಿಗೆ ತಾನೊಲ್ಮೆಯಿಂದಾ ।
ಅನುವಾಗಿ ಬೆರೆತಿಹುದೆ ಸಹಕಾರವೆಂದಾ ॥ ಪಲ್ಲವಿ ॥

ಕಲಿಸುವುದು ಪ್ರಾಚೀನ ಸ್ಮೃತಿಶಾಸ್ತ್ರಸಿಂಧು ।
ಕಲಿಯುಗದಿ ಸಂಘಶಕ್ತಿಯೆ ಶಕ್ತಿಯೆಂದು ॥
ಹಲವರನು ಪರಹಿತವ ಬಯಸಿ ಬಳಿಸಂದು ।
ಕಲೆಯುತೊಡನಾಡುವುದೆ ಸಹಕಾರಕತ್ವಂ ॥ ೧ ॥

ಜಗದ ಶೆರೆಸುಳಿಗಳಲಿ ಸುಳಿಸುಳಿದು ಕೂಲಂ ।
ಸಿಗದೆ ತಲೆಕೆಳಗಾಗಿ ಮುಳುಗುವರ ಮೇಲಂ ॥
ಬಗೆದು ಕಡೆಗೊಂದಿಸುವ ನವ್ಯೇಂದ್ರಜಾಲಂ ।
ಮಿಗಿಲಲ್ತೆ ನವಯುಗದ ಸಹಕಾರ ತತ್ತ್ವಂ ॥ ೨ ॥

ಮಾನವರನರ್ಥಕಾಂಕ್ಷೆಯಲಿ ಪುಟಕಿಟ್ಟು ।
ದೀನದಾನಿಗಳೆಂಬ ಭೇದವನು ಸುಟ್ಟು ॥
ತಾನು ಪರರಿಗೆ ಪರರು ತನಗೆಂಬ ಕಟ್ಟು ।
ಹೀನವೇ ಮಾನ್ಯ ಸಹಕಾರ ಬಂಧುತ್ವಂ ॥ ೩ ॥

ಘೋರ ಋಣಬಂಧಾಂಧಕಾರಕ್ಕೆ ಭಾನು ।
ದಾರಿದ್ರ್ಯರೋಗ ಧನ್ವಂತರಿಯೆ ತಾನು ॥
ಆರೋಗ್ಯಮಣಿಯೆ ವಿದ್ಯಾಕಾಮಧೇನು ।
ತೀರದದು ಹೊಗಳಿ ಸಹಕಾರದ ಮಹತ್ವಂ ॥ ೪ ॥

ಸಹವಾಸಬಲವೆ ಚರಿತಾನುಭವಸಾರಂ ।
ಮಹಿಗೆ ಗ್ರಾಮಸ್ವರಾಜ್ಯವೆ ರಾಜ್ಯಭಾರಂ ॥
ಬಹು ಜನಕೆ ಬಹು ಪಕ್ಷ ಬಹು ಮತಾಧಾರಂ ।
ಸಹಕಾರತಂತ್ರಂ ಸ್ವತಂತ್ರ ಪ್ರಭುತ್ವಂ ॥ ೫ ॥

ನವನೂತನವಿದೆಂದು ಕಾತರಿಸಬೇಡ ।
ಭವದ ವಿಸ್ಮೃತಿಯಿಂದ ಚೇತರಿಸು ಗಾಢ ॥
ಸವಿನುಡಿಯನೊಂದನಿಂದಾಲಿಸೆಲೆ ಮೂಢ ।
ಅವನಿಯೊಳಗಮೃತವಲೆ ಸಹಕಾರ ಸತ್ವಂ ॥ ೬ ॥

## ೧೪. ಯುಗಾದಿ

ನವವರ್ಷ ನವದೂತ ನವ್ಯನಾಗರಿಕತೆಯ ।
ನವತರಂಗವನಂತ ಕಾಲಸಾಗರದಿ ॥
ನವ ರಾಯಭಾರಿ ಪ್ರಸ್ತುತಕೆ ಭವಿತವ್ಯತೆಯ ।
ನವದ ನವ ವಿಜಯ ಪೂರ್ವಾಪರರ ಧುರದಿ ॥ ೧ ॥

ನವ ವರ್ಷಗಳನೆನಿತು ನೋಳ್ಪುದೆಮ್ಮಭಿಮತದಿ ।
ನವದೆ ಪಲತೆರದ ಭೀತಿಗಳಿಹವು ಬೇಡ ॥
ನವದಿ ನವಮುಂ ಪೂರ್ವದಲಿ ಪೂರ್ವ ಭಾರತದಿ ।
ನವ ವರ್ಷ ಸಂದೇಶವಿರೆ ಪೇಳ ಗಾಥ ॥ ೨ ॥

ನವಮದೇಂ ನಿರುತಂ ಸಹಿಷ್ಣು ಭೂಮಾತೆಯಲಿ ।
ನವಮದೇಂ ಮುಗುಳೊಂದು ಮುಂಜಾನೆ ಬೆಳಗೆ ॥
ನವಮದೇಂ ಯುಗಯುಗಾಂತರದ ಮತ ಜಾತಿಯಲಿ ।
ನವಮದೇಂ ಪ್ರಾಚೀನ ಜನಮಧ್ಯದೊಳಗೆ ॥ ೩ ॥

ನವ ಯುಗಾದಿಯೆನೆ ಪೂರ್ವ ಜನಾಂಗಗಳ ಮನಕೆ ।
ನವಮಲ್ಲ ಕಾಲರಾಜನ ಯಂತ್ರತಂತ್ರಂ ॥
ನವ ಯೌವನಂ ಧಮನಿಗಳೊಳಾಳ್ವ ನವಜನಕೆ ।
ನವ ವತ್ಸರಂ ಸರ್ವ ಸಿದ್ಧಿಯ ಸುಮಂತ್ರಂ ॥ ೪ ॥

ನವ ಮಂತ್ರದುಚ್ಚಾರಣೆಯ ನವೋತ್ಸಾಹದಾ ।
ನವಯುಗದ ನಮ್ಮ ಭಾರತವನುದ್ಧರಿಸ್ಯೆ ॥
ನವ ಕೋರಿಕೆಯ ರವಿಯೆ ನವ ಜೀವದಾಹದಾ ।
ನವಯುವಕಯುವತಿ ಹೃತ್ಕಮಲಗಳ ವರಿಸ್ಯೆ ॥ ೫ ॥

---

## ೧೫. ದೀಪಾವಳಿಯ ಗೀತಾವಳಿ

### ಮೊದಲನೆಯ ಪಂಚಕ

ದೇಶದಲಿ ದೀಪಾವಳಿಯ ದಿನವಿದೆಂದು ।
ಶಾಶ್ವತದಿ ಹರಸಿದೆವು ಬಾಲಕರು ಬಂದು ॥
ಈಶ ನಿಮಗತ್ಯಧಿಕ ಸುಖವ ಕೊಡಲೆಂದು ।
ಲೇಸಾಗಿ ಹರಸಿದೆವು ಬಾಲಕರು ಬಂದು ॥ ೧ ॥

ಅನವರತ ಮಾಂಗಲ್ಯ ಭೂಮಾತೆಗೆಂದು ।
ಮನೆತನದಿ ಸೌಭಾಗ್ಯ ನಿಮಗಾಗಲೆಂದು ॥
ದಿನದಿನಕೆ ರಾಜಮನ್ನಣೆ ಹೆಚ್ಚಲೆಂದು ।
ಅನುದಿನವು ಹರಸಿದೆವು ಬಾಲಕರು ಬಂದು ॥ ೨ ॥

ಮಳೆಬಂದು ಬೆಳೆ ಬೆಳೆದು ಧರೆ ತಣಿಯಲೆಂದು ।
ತಿಳಿನೀರಿನಿಂ ಬಾವಿಗಳು ತುಂಬಲೆಂದು ॥
ನಳಿನಮುಖಿಯರು ಸುಪುತ್ರರ ಪಡೆಯಲೆಂದು ।
ಇಳೆಯೊಳಗೆ ಹರಸಿದೆವು ಬಾಲಕರು ಬಂದು ॥ ೩ ॥

ಕರವ ಜೋಡಿಸಿ ನಿಮ್ಮ ಸನ್ನಿಧಿಗೆ ಬಂದು ।
ಭರದಿ ಸಾಲಾಗಿ ನಿಮ್ಮಯ ಮುಂದೆ ನಿಂದು ॥
ಹರಸುತಲಿ ಮಾಡುವಾ ಬಿನ್ನಪವನೊಂದು ।
ಹರುಷದಿಂದಿತ್ತೆಮ್ಮ ಧನ್ಯರೆನಿಸಿಂದು ॥ ೪ ॥

ಪುರದೊಳಗೆ ನಡೆದಪುದು ಹೊಸ ಸಾಲೆಯೊಂದು ।
ತರಳರನು ಬಲ್ಲಿದರನಾಗಿಸುತ ಮುಂದು ॥
ಹಿರಿಯರಾ ಸಿರಿಯನ್ನು ಮೆರೆಯಿಸಲ್ಕೆಂದು ।
ವರವಿತ್ತು ಧನವಿತ್ತು ಪೊರೆಯಿರೈ ಬಂದು ॥ ೫ ॥

### ಎರಡನೆಯ ಪಂಚಕ

ನರಕಾಸುರನ ಕೊಂದ ದಿನವಾದುದಿಂದು ।
ನರಕದಂತಿಹ ಮೌಢ್ಯದಾ ಕೂಪದಿಂದು ॥
ದ್ಧರಿಸಲ್ಕೆ ಧನದ ಸಾಹಾಯ್ಯವಂ ಮಾಡಿ ।
ಪೊರೆಯಿರೈ ಬಾಲಕರ ಬಿನ್ನಪವ ನೀಡಿ ॥ ೬ ॥

ಹಿರಿಯರಿಗೆ ಗೌರವಂ ಕಿರಿಯರಿಗೆ ಮೋಹಂ ।
ಸರಿಸಮಾನರಿಗೆ ಸಹಮೈತ್ರಿ ಸಂದೋಹಂ ॥
ಕರುಣೆಯುಂ ಬಲಹೀನರಿಗೆ ದೊರೆಯಲೆಂದು ।
ಹರುಷದಿಂ ಹರಸಿದೆವು ಬಾಲಕರು ಬಂದು ॥ ೭ ॥

ಮಹಿಯೊಳಗೆ ಸುಸಮೃದ್ಧಿ ಸ್ಥಿರವಾಗಲೆಂದು ।
ಬಹುಜನರಭೀಷ್ಟವೇ ನೆರವೇರಲೆಂದು ॥
ಸಹಕಾರದಾ ಬುದ್ಧಿ ನೆಲೆಗೊಳ್ಳಲೆಂದು ।
ಗೃಹದೊಳಗೆ ಹರಸಿದೆವು ಬಾಲಕರು ಬಂದು ॥ ೮ ॥

ನವಯುಗದ ಸದ್ವಿದ್ಯೆ ಕಲಿಯುವರೆ ಹಿಂದೆ ।
ಅವಕಾಶವಿಲ್ಲದಿರೆ, ಶತಯತ್ನದಿಂದೆ ॥
ಅವತರಿಸಿ ನಿಂದಿಹುದು ನವಶಾಲೆಯೊಂದು ।
ನವನಾಗರಿಕರ ಮನೆಗೆಯ್ತಂದೆವಿಂದು ॥ ೯ ॥

ಧನಿಕಂ ದರಿದ್ರನೆಂಬಾ ಭೇದವಿಲ್ಲ ।
ಇನಿತು ಬೇಕಿನಿತು ಸಾಕಾಗದೆಂದಿಲ್ಲ ॥
ಮನವೊಲಿದು ನೀಡುವಾ ಕುಡುಗೆಯ್ಯ ದಾನಂ ।
ನೆನೆಸಲದೆ ಮಹಿಯೊಳಗನಂತ ಬಹುಮಾನಂ ॥ ೧೦ ॥

### ಮೂರನೆಯ ಪಂಚಕ

ಲಕ್ಷದೀಪಾರಾಧನೆಯ ಹಬ್ಬವೆಂದು ।
ಲಕ್ಷಾಧಿಪತಿ ಮಹಾತ್ಮರ ಮುಂದೆ ಬಂದು ॥
ಲಕ್ಷಲಕ್ಷಾಂತರದೆ ಹರಸುವೆವು ಬೇಡಿ ।
ಲಕ್ಷವೇನುಂ ಬೇಡ ಮನವೊಲಿದು ನೀಡಿ ॥ ೧೧ ॥

ದೇಶಾಭಿಮಾನವೇ ಮತವಾಗಲೆಂದು ।
ದೇಶಸೇವೆಯೆ ಸದಾ ವ್ರತವಾಗಲೆಂದು ॥
ದೇಶದುದ್ಧಾರವೇ ಗುರಿಯಾಗಲೆಂದು ।
ದೇಶದಾ ಬಾಲಕರು ಹರಸಿದೆವು ಬಂದು ॥ ೧೨ ॥

ಹರೆಯದಲಿ ಮುಪ್ಪಿನನುಭವ ಸೇರಲೆಂದು ।
ಜರೆಯೊಳಗೆ ಹರೆಯದುತಸ್ಸಹವಿರಲೆಂದು ॥
ಎರಡರಿಂ ರಾಷ್ಟ್ರದುನ್ನತಿ ಸಾಗಲೆಂದು ।
ಹರಸಿದೆವು ಸಾಲೆಯಾ ಬಾಲಕರು ಬಂದು ॥ ೧೩ ॥

ಕೊಡದೆ ಕಳುಹಿದರು ಬಂದವರನೆಂದೆಂಬಾ ।
ಬಡವರಾದುದರಿಂದ ಕಲಿಸಲಿಲ್ಲೆಂಬಾ ॥
ಕಡುನಿಂದೆಗೆಡೆಗೊಡದೆ ಗತಿಹೀನ ಜನವಂ ।
ಬಿಡದೆ ಕೊಡಲೇಳಿ ವಿದ್ಯಾರ್ಥಿವೇತನವಂ ॥ ೧೪ ॥

ಅಚ್ಚ ಪೀತಾಂಬರವು ಜರತಾರಿ ಬೇಕೆ ।
ಹಚ್ಚಡ ರುಮಾಲು ದುಪ್ಪಟಿ ಧೋತ್ರವೇಕೆ ॥
ಹೆಚ್ಚೇನು ಕಡಮೆಯೇನೊಮ್ಮನಸು ಮಾಡಿ ।
ಮೆಚ್ಚಿಸುವ ರೀತಿಯಲಿ ಧರ್ಮವನು ನೀಡಿ ॥ ೧೫ ॥

## ನಾಲ್ಕನೆಯ ಪಂಚಕ

ಧನಲಕ್ಷ್ಮಿ ಪೂಜೆಯಾ ದಿನವಿಂದಿಗೆಂದು ।
ಮನೆಬಾಗಲಿಗೆ ಜಾಲರೆಯಿದ್ದಿರುವೆವೆಂದು ।
ಘನಲಕ್ಷ್ಮಿದೇವಿ ನಿಮಗೊಲಿಯಬೇಕೆಂದು ।
ಮನದಣಿಯೆ ಧನದಾನ ಮಾಡಿ ನಮಗಿಂದು ॥ ೧೬ ॥

ಧನವೆಂದೊಡನೆ ಬೆಚ್ಚಿ ಬಿದ್ದು ಹೆದರುವರೇ ।
ಕನಕವೇ ಬೇಕೆನ್ನುತಾರು ಸಾರುವರೇ ॥
ಮನವೊಲಿದು ಕೊಟ್ಟ ದುಗ್ಗಾಣಿಯುಂ ಸ್ತುತ್ಯಂ ।
ಹನಿಕೂಡಿ ಹಳ್ಳವೆಂಬರಲೆ ಅದು ಸತ್ಯಂ ॥ ೧೭ ॥

ವ್ಯಾಪಾರ ವ್ಯವಹಾರಗಳ ನಿತ್ಯ ಭರದಿ ।
ದೀಪಾವಳಿಯ ದಿನದ ಕೊನೆಯ ಅವಸರದಿ ॥
ಪಾಪಿ ಬಡ ಬಾಲಕರ ಮರೆತು ಬಿಡಬೇಡಿ ।
ಕಾಪಾಡಿ ಧನದೆ ವಿದ್ಯಾದಾನ ಮಾಡಿ ॥ ೧೮ ॥

ಅಳಿಯನುಡುಗೊರೆಯಲ್ಲ ಮುನಿದು ಕೇಳುವರೆ
ಬಳಿಯ ಸಂಬಳವಲ್ಲ ನಿಂತು ಕೇಳುವರೆ ॥
ಹಳೆ ಸಾಲವಲ್ಲ ಹಗಲಿರುಳು ಕಾಡುವರೆ ।
ಅಳಿಮನವ ತೊಳೆಯಿರೈ ಕೀರ್ತಿಗಳಿಸುವರೆ ॥ ೧೯ ॥

ಆದಾಯ ಲಾಭದಲಿ, ಸೊಗದೊಳಾನಂದಂ ।
ಮೇದಿನಿಯ ಕಷ್ಟದಲಿ ತಾಳ್ಮೆಯಾ ಚಂದಂ ॥
ಸಾಧನೆಗಳಲಿ ವಿಜಯ ಕೆಯ್ಸೇರಲೆಂದು ।
ಮೋದದಿಂ ಹರಸಿದೆವು ಬಾಲಕರು ಬಂದು ॥ ೨೦ ॥

ಐದನೆಯ ಪಂಚಕ

ಬಲಿಯು ದಾನವ ಗೆಯ್ದ ಚರಿತೆಯನು ಪಿಂತೆ ।
ಕಲಿಯಲಿಲ್ಲವೆ ನೀವು; ಇನ್ನೇಕೆ ಚಿಂತೆ ॥
ಬಲಿಪಾಡ್ಯದಾ ದಿನವು ಬಂದಿಹುದು ನೋಡಿ ।
ಒಲಿದಿತ್ತು ನಿಮ್ಮ ಬಾಲಕರ ಕಾಪಾಡಿ ॥ ೨೧ ॥

ಆಯುರಾರೋಗ್ಯಗಳು ನಿಮಗೊದಗಲೆಂದು ।
ಶ್ರೇಯಸ್ಸು ಸಂಪತ್ತು ಹೆಚ್ಚುತಿರಲೆಂದು ॥
ಆಯತದಿ ಜಗದೊಡೆಯನೊಲವಾಗಲೆಂದು ।
ಪ್ರೇಯದಿಂ ಹರಸಿದೆವು ಬಾಲಕರು ಬಂದು ॥ ೨೨ ॥

ವಿನಯಮುಂ ವಿದ್ಯೆಯಲಿ, ಶಕ್ತಿಯೊಡನೆ ದಯಂ ।
ಧನದ ಗಾಂಭೀರ್ಯದೊಳಗೌದಾರ್ಯದುದಯಂ ॥
ಅನುವಾಗಿ ಬಾಳ್ತೆ ಸಾರ್ಥಕವಾಗಲೆಂದು ।
ಅನುನಯದೆ ಹರಸಿದೆವು ಬಾಲಕರು ಬಂದು ॥ ೨೩ ॥

ದಾನಂಗಳಲಿ ವಿದ್ಯೆಯೇ ಮಹಾದಾನಂ ।
ಮಾನಂಗಳಲಿ ವಿದ್ಯೆಯೇ ಸದಭಿಮಾನಂ ॥
ಜ್ಞಾನವನು ಗಳಿಸುವರೆ ದ್ರವ್ಯಾನುಕೂಲಂ ।
ಸಾನುರಾಗದೆ ಮಾಡಿ ಬಗೆದೆಮ್ಮ ಮೇಲಂ ॥ ೨೪ ॥

ಇಂದಲ್ಲ ನಾಳೆಂದು ದಿನಹರಣ ಬೇಡ ।
ಸಂದರ್ಭವನು ಕುರಿತು ಸಂದೇಹ ಬೇಡ ॥
ಬಂಧುಬಾಂಧವರೆಂದು ಬಂದಿರುವೆವೀಗ ।
ಬಂದ ಬಾರಿಗೆ ಕೊಟ್ಟು ಕಳುಹಿಕೊಡಿ ಬೇಗ ॥ ೨೫ ॥

---

## ೧೬. ಜನ್ಮಕಥೆ

೧. "ಎಲ್ಲಿಂದ ಹೇಳಮ್ಮ ನಾನಿಲ್ಲಿ ಬಂದೆ?
ಎಲ್ಲಿಂದ ನೀನೆನ್ನ ಕಂಡು ಕರತಂದೆ?"—
ಮೆಲ್ಲುಲಿಯನಾಲಿಸುತ ಬಾಲಕನ ತೊದಲ
ಸಲ್ಲಲಿತೆ ಪೇಳತೊಡಗಿದಳು ತುದಿವೊದಲ
ಗಲ್ಲವನು ಸವರಿ: "ಬಯಕೆಯದಾಗಿ ಮುನ್ನಾ
ಇಲ್ಲೆ ಹೃದಯದೊಳಿದ್ದೆ, ಬಲು ಮುದ್ದು ಚಿನ್ನಾ!

೨. "ನೀನಿದ್ದೆ ಚಿಕ್ಕಂದಿನಾಟಗಳೊಳೆನ್ನಾ
ನಾನಾ ಪರಿಯ ಗೊಂಬೆ ಬೊಂಬೆಯಲಿ ಮುನ್ನಾ;
ಸಾನುರಾಗದಿ ತೊಟ್ಟಿಲನು ತೂಗೆ ನಾನು,
ಆನಂದವಂ ತಳೆದ ಪುತ್ಥಳಿಯೆ ನೀನು;
ನಾನು ಪೂಜಿಸುತಿರಲು ಕುಲದೇವರನ್ನಾ,
ನೀನೆ ಮೂರ್ತಿಯೊಳಿದ್ದೆ, ಬಲು ಮುದ್ದು ಚಿನ್ನಾ!

೩. "ಮನಸಿನೊಳಗೆದ್ದ ಸವಿ ಕೋರಿಕೆಯೊಳೆಲ್ಲಾ,
ಅನುಮಾನವೆನ್ನ ಮಹದಾಶೆಯೊಳಗೆಲ್ಲಾ,
ಜನನಿ ಜನಕರ ಪಿರಿದು ಲಾಲಸೆಗಳೆಡೆಯೊಳ್,
ಮನೆತನದೊಳಾಳ್ವ ಧನಲಕ್ಷ್ಮಿ ತಾಯ್ದೊಡೆಯೊಳ್,
ಇನಿಸಿನಿಸು ಕಾಣಿಸದೆ, ಬಹು ಕಾಲದಿಂದಾ
ತನುವನಡಗಿಸಿದೆ ನೀ, ಬಲುಮುದ್ದು ಕಂದಾ:

೪. "ಸಮನಿಸುತ್ತಿರಲೆನಗೆ ಯೌವನಾಭ್ಯುದಯಂ,
ಕಮಲದಂತರಳುತಿರೆ ದೇಹದಲಿ ಹೃದಯಂ,
ಸುಮದಿ ಸುಮಧುರ ಸುರಭಿಯಂತಿರ್ದು ನೀನು,

ಮಮ ಯುವತಿರೂಪಾತಿಶಯಗಳಿಗದೇನು
ರಮಣೀಯ ಮೃದುಕೋಮಲತೆಯಿತ್ತೆ ನಿನ್ನಾ
ಮಮತೆಯಿಂ, ತಿಳಿಯದಲೆ, ಬಲು ಮುದ್ದು ಚಿನ್ನಾ!

೫. "ದೇವದೇವಾನುಗ್ರಹದೆ ದೊರೆತ ನುತನೇ,
ಸಾವಿಲ್ಲದವನೆ, ಚಾಂಚಲ್ಯವಿರಹಿತನೇ,
ಭಾವಿಸಲು ಸಚ್ಚಿದಾನಂದಸಾಗರದಿ
ಭೂವಲಯದಾದಿಯಲೆ ಜನಿಸಿ, ಸಡಗರದಿ
ಆವಗಂ ಮಮ ಹೃದಯದೊಡನಾಡೆ ಬಂದಾ
ಜೀವಾತ್ಮನಲ್ತೆ ನೀ? ಬಲು ಮುದ್ದು ಕಂದಾ!

೬. "ಮೊಗವ ನೋಡಲು ನಿನ್ನ, ನಿನ್ನಯ ರಹಸ್ಯಂ
ಮಿಗಿಲಹುದು, ತಿಳಿಯದೈ; ನೀನೆನಗೆ ವಶ್ಯಂ
ಸಿಗುವುದೆಂಬಾ ಮಾತು ಸಾರ್ಥಕವು ಹೇಗೆ,
ಜಗದಿ ಸಕಲರಿಗೆ ಸೇರಿದ ಜೀವನಾಗೆ?—
ಮಗನೆಂದು ಮುದ್ದಿಡುವೆ ನಿನ್ನ ಮುದದಿಂದಾ:
ನಗುನಗುತ ಬಾರಯ್ಯ, ಬಲು ಮುದ್ದು ಕಂದಾ!

೭. "ಗಳಿಗೆಯೊಂದಿರದೆ ಪೋಗಲು ನೀ ಭವನದಿ,
ಕಳೆದೆ ನಿನ್ನನ್ನೆಂದು ಕಳವಳಿಸಿ ಮನದಿ,
ಅಳುತೆದೆಗೆ ಬಿಗಿದಪ್ಪಿ ಪಿಡಿವೆ ನಿನ್ನನ್ನಾ:
ಇಳೆಯ ದುರ್ಲಭವಸ್ತುವನು ನಿನ್ನನೆನ್ನಾ
ಎಳೆತೋಳ್ಗಳಾವ ಮಾಯಾಜಾಲದಿಂದಾ,
ತಿಳಿಯೆ, ಸೆರೆಗೊಳಿಸಿದುವು? ಬಲು ಮುದ್ದು ಕಂದಾ!"

## ೧೭. ಬಡವರ ಬಿನ್ನಹ

ಪತಿತಶರಣು ಜನಾಂಗತತಿರಕ್ಷಕನೆ ಸಕಲ ।
ಕ್ಷಿತಿಪಾಲಪಾಲಕನೆ ಪೊರೆ ದೇವದೇವಾ ॥
ಅತಿಪುರಾತನದ ಭಾರತಸುತರ ಮೇಲ್ನಿನ್ನ ।
ಯತುಲ ಕರುಣಾಕಟಾಕ್ಷವ ಬೀರು ದೇವಾ ॥ ೧ ॥

ನಿನ್ನ ದಾಸನು ಸಾರ್ವಭೌಮ ತಾನೀ ಪೂರ್ವ ।
ದುನ್ನತಿಯ ದೇಶದಲಿ ಪಾಪಿಗಳು, ದೇವಾ ॥
ಇನ್ನೆಗಂ ಗೆಯ್ಯುತಿರ್ದನ್ಯಾಯಗಳನೆಲ್ಲ ।
ವಂ ನೋಡಿ ಹರಿಪಂತೆ ಕರುಣಿಸೆಲೆ ದೇವಾ ॥ ೨ ॥

ನಮ್ಮ ಹಿರಿಯರ ದಾಯವನು ಮನೋವಾಕ್ಕಾಯ ।
ದುಮ್ಮಳಿಸುತಿರೆ ಪೊರೆಯೆ ಬಲು ರೇಗಿ ದೇವಾ ॥
ಸುಮ್ಮನಿರೆ ದಂಡಿಸುವ ಹಮ್ಮುಗಾರರ ದಂಡ ।
ವಂ ಮುರಿದು ಕಾಪಾಡಿಕೊಡು ದೇವದೇವಾ ॥ ೩ ॥

ಊರೊಳ್ ಸ್ವರಾಜ್ಯಪ್ರಚಾರಮದು ತಪ್ಪೇನು ।
ಭಾರತೋದ್ಧಾರವ್ರತಧಾರಣದಿ ದೇವಾ ॥
ಕ್ರೂರ ಬಂಧನ ಪ್ರಾಪ್ತಮಾಗಿರುವ ನಮ್ಮಾಪ್ತ ।
ವೀರ ಸ್ತ್ರೀ ಪುರುಷರನು ಬಿಡಿಸಿಕೊಡು ದೇವಾ ॥ ೪ ॥

ಊರೊಳ್ ಸ್ವರಾಜ್ಯಪ್ರಚಾರಮಾಗಲು ಮತ್ತೆ ।
ಧಾರುಣಿಯು ಸ್ವಾರಾಜ್ಯಮಲ್ಲವೇಂ ದೇವಾ ॥
ಭಾರತೋದ್ಧಾರವ್ರತಧಾರಣದಭೀಷ್ಟವನು ।
ಕಾರುಣ್ಯದಿಂ ಸಲ್ಲಿಸೈ ದೇವದೇವಾ ॥ ೫ ॥

ಅಂತೆ ನೀನೆಮಗಿತ್ತ ಪುಣ್ಯಕ್ಷೇತ್ರದಿ ಚಿತ್ತ ।
ಸಂತುಷ್ಟಿಯಿಂ ಸತತ ಜೀವಿಸಲು ದೇವಾ ॥
ಪಿಂತೆ ನಡೆದಂತೆ ಸುಖಶಾಂತಿಗಳನನುಗೊಳಿಸಿ ।
ಚಿಂತೆಯಿರದಂತೆ ಸಲಹೈ ದೇವದೇವಾ ॥ ೬ ॥

## ೧೮. ಗೃಮೆಯ ವ್ಯೈಮೆ

ಇಗೊ ದೊಡ್ಡ ಸಂಸಾರ ಭಾರವನು ಹೊರುತ ।
ಹೆಗಲ ಹೊರೆಯಲಿ ಬಳುಕಿ ತತ್ತರಿಸುತಿರುತ ॥
ದುಗುಡದಿಂ ಬಳಲುವನು ಹೇರನಿಳಿಸಿದೆಯಾ ।
ದಿಗಿಲುಗೊಳುವನು ನೀನು ದಾರಿ ತಿಳಿಸಿದೆಯಾ ॥ ೧ ॥

ನೋಡು ಚಿಂತಾಕ್ರಾಂತನಾಗಿ ನೆರೆನೊಂದು ।
ಬಾಡಿ ಕಳೆಗುಂದಿ ಹಲುಬುವನು ಹೇಳಿಂದು ॥
ಮೋಡ ಕವಿದಾ ಮೊಗದಿ ನಿನ್ನ ದೆಸೆಯಿಂದಂ ।
ಮೂಡಿತೇನರೆಗಳಿಗೆಯಾದೊಡಾನಂದಂ ॥ ೨ ॥

ಉಕ್ಕುತಿರೆ ಕಣ್ಣೀರ ಧಾರೆ ಕಂಗೆಟ್ಟು ।
ಬಿಕ್ಕುತಿರೆ ನಿಟ್ಟುಸಿರು ಒಡನೆ ಕೈಕೊಟ್ಟು ॥
ಅಕ್ಕರೆಯೊಳೆರಡು ಸವಿ ಮಾತುಗಳನಾಡಿ ।
ತಕ್ಕಂತೆ ನೀ ಸಂತವಿಸಿದೆಯಾ ನೋಡಿ ॥ ೩ ॥

ಅತ್ತಿತ್ತ ಸುತ್ತುವನು ಬೆದರಿ ಬೆರಗಾಗಿ ।
ಅತ್ತತ್ತು ನಡುಗುವನು ಅಗೊ ಬೇಗ ಪೋಗಿ ॥
ಎತ್ತಣಿಂದೇನೆಂದು ತಿಳಿಯೆ ಕೇಳಿದೆಯಾ ।
ಎತ್ತಿ ಹಿಡಿಯುತ್ತ ನಿರ್ಭಯವನುಸಿರಿದೆಯಾ ॥ ೪ ॥

ಕರ್ಮಿಗಳ ಉದ್ಧಾರ ಸಾಧನೆಯೆ ಜಗದಿ ।
ಧರ್ಮವಲ್ಲವೆ ಮಾನವರಿಗೆ ಯುಗಯುಗದಿ ॥
ಕರ್ಮಫಲದಿಂದ ನರಳುವನು ನೋಡಿದೆಯಾ ।
ಮರ್ಮವನು ತಿಳಿದೊಂದು ಮಾತನಾಡಿದೆಯಾ ॥ ೫ ॥

ಶೋಕದುರಿಯೇರಿದುದು ಹಾ ತಾಳಲಾರಂ ।
ಸಾಕುಸಾಕೆನ್ನುವನು ಮುಂದರಿಸಲಾರಂ ॥
ಕೈ ಕಟ್ಟಿ ಲಕ್ಷಿಸದೆ ದೂರ ಸಾರಿದೆಯಾ ।
ಕೈಕೊಟ್ಟು ಬರಹೇಳಿ ಸಾಸಮಾಡಿದೆಯಾ ॥ ೬ ॥

ಇಲ್ಲವೈ ಮಾಡಲೆಣಿಸಿದ್ದೆ ನೆನಬೇಡ ।
ಎಲ್ಲ ನೀ ಪೇಳ್ವುದಿರಬಹುದು ಅದು ಬೇಡ ॥
ಸಲ್ಲಲೇ ಸಲ್ಲ ಬರೆ ಮನ ಸಲ್ಲದಣ್ಣ ।
ಬಲ್ಲರೊಳಗೆಲ್ಲ ಗೈವನೆ ಮನುಜನಣ್ಣ ॥ ೭ ॥

ಪಾಪಿಗಳೆ ನಾವೆಲ್ಲ ರಾದೊಡೇನೀಗ ।
ಪಾಪಿಯೊರ್ವಂ ತ್ರಾಹಿಯೆಂದನಗೊ ಬೇಗ ॥
ಪಾಪಿಯನು ಸತ್ಕರಿಸೆ ಕೈಯ ಚಾಚಿದೆಯಾ ।
ಪಾಪಿ ನೀನಾದೊಡಂ ಪುಣ್ಯಗಳಿಸಿದೆಯಾ ॥ ೮ ॥

ಕಳೆದುಪೋಪುದು ಹೊತ್ತು ಕರೆವನಿಗೊ ಕೇಳು ।
ತಿಳಿತಿಳಿದು ಸುಮ್ಮನಿರಲಾಗದೆದ್ದೇಳು ॥
ಇಳೆಯೊಳಗೆ ಕೈಲಾದುದೆಸಗಬಹುದಲ್ಲಾ ।
ಭಳಿರೆ ಮಾನವ ನೀನೆಯೆನಿಸಬಹುದಲ್ಲಾ ॥ ೯ ॥

---

## ೧೫. ಸಹಕಾರ ಸಾಮ್ರಾಜ್ಯ

ಕೇಳಿರೈ ಸಹಕಾರ ಚರಿತಾಮೃತದ ಸಾರ ।
ಹೇಳಿರೈ ಸಹಕಾರ ಜಯವಾಗಲೆಂದು ॥
ಬಾಳಿರೈ ಮೆಯ್ಯಾರೆ ಸಹಕಾರಬಲವೇರೆ ।
ಆಳಿರೈ ಸಹಕಾರ ಸಾಮ್ರಾಜ್ಯ ಮುಂದು ॥ ೧ ॥

ಕೆಟ್ಟನೇ ಕೊಟ್ಟವನು ಸಾಲವನು ಪಡೆದವನು ।
ನಿಟ್ಟುಸಿರ ಬಿಟ್ಟನೇ ಕೊಡಲಾರದಂದು ॥
ಕಟ್ಟಕಡೆಗಿಬ್ಬರಲಿ ಮೆರೆದ ಸಹಕಾರದಲಿ ।
ಕೊಟ್ಟವರು ಪಡೆದವರು ಒಂದಾದರೆಂದು ॥ ೨ ॥

ಗಳಿಸುವರು ಕೇಳ್ ಕೆಲರು ತಿನ್ನದುಣ್ಣದೆ ಪಲರು ।
ಕಳೆಯುವರು ತಿಂದು ನೋಡದೆ ಹಿಂದುಮುಂದು ॥
ಭಳಿರೆ ದೃಢನಿಶ್ಚಯದೆ ಸಹಕಾರಿ ವಿಕ್ರಯದೆ ।
ಉಳಿಸಿ ಕಟ್ಟಿಡುವರಿಗೊ ಉಂಡಷ್ಟು ತಿಂದು ॥ ೩ ॥

ಧನಮತ್ತ ಮ್ಯಾಲಕರು ಗೇಯ್ಮೆಯಾ ಚಾಲಕರು ।
ಮುನಿದು ಹೋರಿದರಿನ್ನೆಗಂ ರೇಗಿ ನೊಂದು ॥
ತನುಬಲಕೆ ಧನಬಲವು ಮನಸೋತು ಸಿರಿಯೊಲವು ।
ಅನುಕೂಲಿಸುವುದು ಸಹಕಾರವಿರೆ ಹಿಂದು ॥ ೪ ॥

ತನಗೆ ತಾನೇಯೆಂದು ಪರರ ಮರೆಯುವುದೊಂದು ।
ಜನಹಿತದಿ ತನ್ನ ತಾ ಮರೆವ ಪಥವೊಂದು ॥
ತನಗೆ ತಾನಾಗಿ ಪರಹಿತವ ಸಾಧಿಸುವವರ ।
ವಿನುತ ನವ ಪಥವೆ ಸಹಕಾರವಲೆ ಬಂಧು ॥ ೫ ॥

ಇಹದಿ ಪರವಿಲ್ಲೆಂಬ ಚರ್ವಣವ ಕಿವಿತುಂಬ ।
ಸಹನವಾದುದೆ ಕೇಳಿ ಸಾಧಿಸಿರಿ ಬಂದು ॥
ಇಹವೆ ಪರವೈ ಸ್ವಾರ್ಥವೇ ಆಯ್ತು ಪರಮಾರ್ಥ ।
ಸಹಕಾರ ಸಹಜಬಾಂಧವ್ಯವೆಯ್ತೆಂದು ॥ ೬ ॥

---

## ೨೦. ಯಾಚನೆ—ಸೂಚನೆ

ನೊಂದೆನಪ್ಪಾ ಹಸಿದು ಬಸವಳಿದು ಬೆಂದು ।
ಒಂದೆರಡು ಕಾಸುಗಳ ನೀಡಿ ಸಲಹೆಂದು ॥
ಬಂದ ತಿರುಕನ ಕೊಟ್ಟು ಕಳುಹಿದೆನು ನಾನು ।
ಸಂದ ಧರ್ಮದೆ ಬಹುದು; ಕೊಡದೆ ಬಹುದೇನು ॥ ೧ ॥

ಇತ್ತುದನು ವೆಚ್ಚ ಮಾಡಿದನುಂಡು ತಿಂದು ।
ಮತ್ತೊಮ್ಮೆ ಮಗುಳೊಮ್ಮೆ ಕೇಳಿದನು ಬಂದು ।
ಸುತ್ತಿದನು ಊರೆಲ್ಲ ಭಿಕ್ಷೆಯನು ಬೇಡಿ ।
ಸತ್ತನೈ ಕೊನೆಗೆ ಹಸಿಹಸಿದು ಹೊರಳಾಡಿ ॥ ೨ ॥

ಮರಳಿ ಬಂದೊಬ್ಬ ತಿರುಕಗೆ ಕೊಡದೆ ತೋರಿ ।
ಅರುಹಿದೆಂ ಸ್ವಪರಹಿತ ಸಾಧನೆಯ ದಾರಿ ॥
ಪುರದೊಳಿಹ ಸಹಕಾರಿ ಸಂಘವನು ಸೇರಿ ।
ಪುರುಷರಲಿ ಪುರುಷನಾದನು ನಿರಾಧಾರಿ ॥ ೩ ॥

ಇನ್ನು ತನುಮನಬುದ್ಧಿಗಳ ನೀಡಿ ಬಿಡದೆ ।
ಅನ್ನವಸ್ತ್ರಕ್ಕೆಂದು ಪರರ ಮೊರೆಯಿಡದೆ ॥
ತನ್ನಶನವಸನಗಳ ತಾನೆ ದುಡಿದುಳಿಸಿ ।
ಉನ್ನತಿಯನೆಯ್ದಿದನು ಮನ್ನಣೆಯ ಗಳಿಸಿ ॥ ೪ ॥

---

## ೨೧. ಪದ್ಯರಚನೆ

ಚುಂಬಿಸುತ ಮುದ್ದಾಡಿ ಹರಸಿ ಸರಸತಿಯು ।
ಬಿಂಬಿಸಲು ಮನದೊಳಗೆ ಅರೆಗಳಿಗೆ ಮತಿಯು ॥
ಇಂಬಾಗಿ ಸುಖಕೆ ಹುರಿದುಂಬಲಾವೇಶಂ ।
ತಂಬೆಲರುಸಿರಿನಂತೆ ಬಹುದು ಸಂದೇಶಂ ॥ ೧ ॥

ಶಾರದೆಯು ನಗುತಿಹಳೆ ನಿರುತಂ ಮುಖೇಂದು ।
ಬೀರುತಿರೆ ಚಿಂತೆಯಂ ವ್ಯಾಕುಲದ ಬಿಂದು ॥
ತೋರಿ ಹೊಂದಿರೆ ನಿನ್ನ ತ್ರಿಕರಣಗಳೊಳಗೆ ।
ಸೇರುವುದು ಭಾವಗಳ ರೂಪರಸಗಳಿಗೆ ॥ ೨ ॥

ಶೋಕವೋ ತೋಷವೋ ಶಂಕಿಸಲು ಬೇಡ ।
ಸ್ವೀಕರಿಸು ಮನದಣಿಯೆ ಜಾಣರನು ಗಾಢ ॥
ಪೋಕನಾ ಹಾಡಿನಿಂ ಮರುಳುಗೊಳಿಸುವರೆ ।
ಆಕೆ ದಯಪಾಲಿಸುವ ವರವ ತೊರೆಯುವರೆ ॥ ೩ ॥

ಮನದೊಳಾಡಿಸಿ ತೂಗಿ ತಲೆಯೊಳತ್ತಿತ್ತ ।
ಇನಿದಾದ ರಸರಾಗದಿಂ ಬೆಳಗಿಸುತ್ತ ॥
ಅನುನಯದ ಪದಗಳಿಂದರ್ಥವನು ಮೆರೆಸಿ ।
ಘನತತ್ತ್ವದರ್ಥದಿಂ ಶಬ್ದಗಳನುರಿಸಿ ॥ ೪ ॥

ಬಂದು ನಲಿವುದು ಕೇಳೆಲೈ ದಿವ್ಯಕಾವ್ಯಂ ।
ಬಂಧುರಂ ಸುರುಚಿರಂ ಮೃದು ಹೃದ್ಯಪದ್ಯಂ ॥

---

# ೨೨. ನಗುಮೊಗವ ತಳೆದಿರಲು ನಗುತ ಬಳಿಗೈದುವರು

**ದುಃಖಾದುದ್ವಿಜತೇ ಸರ್ವಃ ಸರ್ವಸ್ಯ ಸುಖಮೀಪ್ಸಿತಮ್ — ಶಾಂತಿಪರ್ವ.**

ನಗುಮೊಗವ ತಳೆದಿರಲು ನಗುತ ಬಳಿಗೈದುವರು ।
ದುಗುಡದಿಂದಳುತಿರಲು ಗಮನಿಸುವರಿಲ್ಲ ॥
ಸೊಗವ ಹೆರವರ ಬೇಡಿ ತೆಗೆದುಕೊಂಡುಣಬೇಕು ।
ಜಗದಿ ಬೇಡದೆ ದೊರೆವ ದುಃಖಮದು ಸಲ್ಲ ॥ ೧ ॥

ಹಾಡಿದೊಡೆ ಪಡಿನುಡಿಯು ಕಾಡುಗುಡ್ಡಗಳೆಲ್ಲ ।
ತೀಡಿ ಸಂತಸದಿ ಬೀರ್ವುವು ಬೀಗಿ ಕೂಗಿ ॥
ಕಾಡುತಿಹ ಮನದಳಲ ಪೀಡೆಯಾ ನಿಟ್ಟುಸಿರ ।
ಪಾಡು ಪೋದಪುದಡಗಿ ಗಾಳಿಪಾಲಾಗಿ ॥ ೨ ॥

ಸಂತಸಂಬಡೆ ನಿನ್ನನಂತೆ ಆಶ್ರಯಿಸುವರು ।
ಚಿಂತಿಸಲು ನಿನ್ನ ತೊರೆದತ್ತ ಸಾರುವರ್ರೈ ॥
ಸಂತಸದ ಪಾಲು ಬೇಕಂತೆ, ಸಾಲದು — ಚಿಂತೆ ।
ಯಾಂತು ಬದುಕುವುದೆಂತು ಬೇಡವೆನ್ನುವರ್ರೈ ॥ ೩ ॥

ಸ್ವೀಕರಿಸೆ ಮೋದದೊಳನೇಕ ಗೆಳೆಯರು ಬಹರು ।
ಶೋಕದೊಳ್ ಗೆಳೆಯರುಂ ವಿಮುಖರ್ರೈ ಮಹಿಯೊಳ್ ॥
ನೀ ಕೊಟ್ಟ ಸಿಹಿಸೊಗವ ಬೇಕುಬೇಕೆಂದುಣುವ ।
ರೇಕಾಂತಮುಣಬೇಕು ವ್ಯಾಕುಲದ ಕಹಿಯೊಳ್ ॥ ೪ ॥

ಪಡೆದ ಸುಗ್ಗಿಯ ದಿನದಿ ಕೊಡಲೌತಣವ ನೆರೆದು ।
ಸಡಗರದೆ ಬಂದು ಸೇರುವರು ಜನರೆಲ್ಲ ॥
ದುಡಿಯಲಾರದೆ ಬಳಲುತೊಡಲಿನುಪವಾಸದಿಂ ।
ಮಡಿವಂದು ಕಣ್ಬಿಟ್ಟು ನೋಳ್ಪರಾರಿಲ್ಲ ॥ ೫ ॥

ಎಂದು ಸಿರಿ ಮೆರೆದಿಹುದೊ ಅಂದೆ ನೆಂಟರುಮಿಷ್ಟ ।
ರೆಂದು ಸಂದಣಿಸಿ ಸುಖಿಸುವರು ಹೆಚ್ಚೇಕ್ರೈ ॥
ಬಂದ ಸಂಪದವಾರೆ ದಂದುಗಂ ಮೀರೆ ನೀ ।
ಸಂದುಗೊಂದಿನೊಳೊರ್ವನೇ ನರಳಬೇಕ್ರೈ ॥ ೬ ॥

## ೨೩. ಕಲಿತಾಕೆ

೧. ದೇವಲೋಕದ ಕನ್ನೆ, ನಿಖಿಲಗುಣಸಂಪನ್ನೆ,
ಪಾವನೆ, ಪುನೀತೆ, ಸಾಕ್ಷಾತ್ ಸರಸ್ವತಿಯ,
ಭೂವಲಯದಲಿ ಸರ್ವಮಾನ್ಯೆ, ಸರ್ವಜ್ಞೆ, ವಿ
ದ್ಯಾವತಿ ಯುವತಿಯೆನ್ನ ವರಿಸಿದ ಸುಮತಿಯ —
ಭಾವಿಸಲ್ಕಿದರಿಂದ ಮೇಲು ಮಿಗಿಲೆನಿಪುದಿ
ನ್ನಾವುದಿದೆ? — ನೋಡೆನ್ನ ಸಲೆ ಕಲಿತ ಸತಿಯ!

೨. ಏನಾಯ್ತು ಶಾಕಪಾಕವ ಮಾಡಲರಿಯದಿರೆ?
ಜ್ಞಾನಾರ್ಜನೆಯೆ, ತಿಳಿಯು, ಜನ್ಮದಾ ಧ್ಯೇಯಂ!
ತಾನು ವಿದ್ಯೆಯ ಪಡೆದು (ಪತಿಯಜ್ಞನಾದೊಡಂ)
ಮಾನಮಂ ಕಾಯ್ದುಕೊಳ್ವುದೆ ಲೋಕನ್ಯಾಯಂ!
ಹೀನ ಗಂಡಸರೇಕೆ? ಅಡುಗೆಗಲ್ಲವೆ? — ಜೋಕೆ!
ಮಾನಿನಿಯ ತೆಗಳದಿರು ಸಲೆಕಲಿತಸ್ತ್ರೀಯಂ!

೩. ಮನನ ವಾಚನ ಪಠನಗಳೊಳೆಲ್ಲ ಕೆಟ್ಟಿತೆಂ
ದೆನಬೇಡ ಸಕಲಗೃಹಧರ್ಮದಾ ಬಣ್ಣಂ:
ಮನೆತನದಿ ಸುವಿವೇಕವೇನದರ ಪುರುಷಾರ್ಥ
ವನು ಸುಡ್ಡೆ ಒಣಹರಟೆಗಳ ಮಸಣ ಮಣ್ಣಂ!
ವನಿತೆಯನು ಜರೆಯದಿರು ಪುಸ್ತಕಪರಿಶ್ರಮದ
ಘನತೆಯಿಂ ಕಂಗೊಳಿಪ ಸಲೆಕಲಿತ ಪೆಣ್ಣಂ !

೪. ಬಾರೆ, ಮೋಹದ ರಾಣಿ! ಮುದ್ದು ರಸಿಕಳೆ! ಜಾಣೆ!
ಏರಿ ಪಾಂಡಿತ್ಯ ಶಿಖರಕ್ಕೆ, ಕವಿಗೇಯೇ,
ಸಾರಸಾಹಿತ್ಯಸಾಗರದಾಳವನ್ನಳೆದು
ಬೀರೆ ವಿದ್ಯೆಯ ಗೌರವವನಾದಿಮಾಯೇ!
ಶಾರದಾಂಬೆಯ ಕಂಠಭೂಷಣೆ! ಸುಭಾಷಿಣಿಯೆ!
ಚಾರು ಸುಖದಾಯೆ! ಸಲೆಕಲಿತ ಮಮಜಾಯೇ!

೫. ಮತ್ತೆ ಮಗುವನು ನಾನು ತೊಟ್ಟಿಲೊಳಗಿಟ್ಟು ತೂ
ಗುತ್ತಲಿರೆ, ಹೊತ್ತಗೆಯ ಮೊತ್ತದ ಮಹಿಮೆಯ
ಬಿತ್ತರಿಸಿ (ಮಗುವಿಗಲ್ಲದೆ) ಜಗಕೆ ತಾಯೆನಿಸಿ,
ಉತ್ತರೋತ್ತರ ಕೀರ್ತಿಗಳಿಸಿದುತ್ತಮೆಯ
ಚಿತ್ತದಲಿ ನೆನೆದು ಸರ್ವೋತ್ತಮನ ವಂದಿಸುವೆ
ನಿತ್ತು ಪೊರೆದುದಕೆನಗೆ ಸಲೆಕಲಿತ ರಮೆಯ!

---

## ೨೪. ಪರವಸ್ತ್ರ

ಪರವಸ್ತ್ರಗಳ ಧರಿಸಿ ಮೆಯ್ಯೊಳೆಲ್ಲ ಗುಲಾಮು ।
ಗಿರಿಯ ಮುದ್ರೆಯ ತೋರ್ಪುದೇನಹಂಕಾರಂ ॥
ಹೆರವರಿಗಧೀನತೆಯನರಿಪ ಲಾಂಛನದಿಂದ ।
ಹರಕು ಚಿಂದಿಯೆ ಮೇಲದುವೆ ಅಲಂಕಾರಂ ॥ ೧ ॥

ತಲೆಮುಂಡೆಯನ್ನೇರಿ ಸ್ವಪ್ರತಿಷ್ಠೆಯ ತೋರಿ ।
ಕುಲಗೌರವವನಳಿಸಿ ನಿನ್ನಯಾ ಟೋಪಿ ॥
ನಿಲಲೆನ್ನಡಿಯಲಿ ನೀನಲ್ಪರಾ ಸೋಂಕಿನಿಂ ।
ಸಲಹಿದುದು ನಾನಲ್ತೆಯೆನುವುದಲೆ ಪಾಪಿ ॥ ೨ ॥

ಒಡೆಯರಿಂ ಕಡಪಡೆದ ತೊಡಿಗೆಗಳ ತೊಡುತ ಗಡ ।
ಪೊಡಮಡುತ್ತಡಿಯಿಡಲು ತೊಡಗಿದೆಯ ಮಡೆಯಾ ॥
ಕಡುಕೆಡುಕಿನೀ ವೇಷ ನಿನ್ನ ನಾಚಿಕೆಯ ನಾ ।
ಲ್ಮಡಿ ಬಳೆಯಿಸದೆ ಮೂಢ ಜಡಭರಿತ ಬಿಡೆಯಾ ॥ ೩ ॥

ಅಂಗವನ್ನೇರ್ದ ಪರವಸ್ತ್ರ ನಿನ್ನಭಿಮಾನ ।
ಭಂಗಮಾಡುವುದಲ್ತೆ ನೋಡು ದಿನದಿನಕೆ ॥
ಮಂಗ ಕೆಡಿಸದಿರೆನ್ನ ನಿನ್ನ ಮೆಯ್ದೊಗಲಿನು ।
ತ್ತುಂಗ ನಾನೆನ್ನುವುದು ನಿನ್ನವರ ಮನಕೆ ॥ ೪ ॥

---

## ೨೫. ವಿರಾಮವೇತನಿ ಮಹಾಶಯರು

ಆರಿ ಬತ್ತಿದ ಜಸವನಚ್ಚಳಿದ ಹೆಚ್ಚಳವ ।
ತೀರಿದಾಡಂಬರವ ಕಂದಿದಬ್ಬರವ ॥
ತೋರಿ ಬೆರಳಿಂದೇಡಿಸುವ ಚರಿತೆಯಂತೆ ಕ ।
ಣ್ಣೀರ ಧಾರೆಯನಿಳಿಪ ಬೇರೆ ಕತೆಯಿಹುದೆ ॥ ೧ ॥

ಸಭೆಗಳಲಿ ನೆರೆದವರು ತಲೆ ಬಗ್ಗಿಸುತ ಮಹಾ ।
ಪ್ರಭುವೆ ಚಿತ್ತೈಸಬೇಕೆಂದೊರೆದುದೆಂತು ॥
ಪ್ರಭೆಯಾರಿ ಕುಸಿದು ಧರೆಗುರುಳ್ದ ತಾರಗೆಯಂತೆ ।
ನಭದಿಂದ ಸರಿದು ಕಾಲಡಿಯೊಳಿಹುದೆಂತು ॥ ೨ ॥

ಉದ್ಯಾನಗಳೊಳುಪಾಹಾರಕಾಲದೊಳಿತ್ತ ।
"ಹೃದ್ಯ" ಭಾಷಣದಿ ಚಪ್ಪಾಳೆಯೇನೆಂಬೆ ॥
ಸದ್ಯದ ವಿರಾಮದೊಳಘೋರಂ ಕಠೋರಮುಮ ।
ವದ್ಯ ದುಸ್ಸಹ ಜಿಗುಪ್ಸೆಯನದೇನೆಂಬೆ ॥ ೩ ॥

ಜೀಯ ಬುದ್ಧೀ ಎಂದು ಕೆಳನೌಕರರು ಬಂದು ।
ಕಾಯುತಿರೆ ಮನೆಗೆಲಸ ಮಾಡಿಸಿದುದೇನು? ॥
ಪ್ರಾಯವೇರುತ ನಡುಗಿ ಹಿಡಿವರಿಲ್ಲೆಂದು ಕಡೆ ।
ಹಾಯಿಸುವರಿಲ್ಲವಲ್ಲಾ ಎನುವುದೇನು ॥ ೪ ॥

ಶ್ರೀಯುತರು ಹಿಂದೆ ನಡೆವಾಗ ದಾರಿಯ ಬಿಡೆ ದ ।
ಲಾಯತರು ಮುಂದೋಡಿ ಚೀರಿದುದು ಹೇಗೆ ॥
ವಾಯಿದೆಯು ದಾಟುತ ವಿರಾಮಕಾಲವು ಬರಲು ।
ರಾಯರೊಬ್ಬರೆ ಬಾಗಿ ಹೋಗುವುದು ಹೇಗೆ ॥ ೫ ॥

ಗ್ರಾಮಗ್ರಾಮದಿ ತಿರುಗಿ ಬೆಸಸಿ ಪ್ರಜೆಗಳ ಯೋಗ ।
ಕ್ಷೇಮವನು ರಾಜಸಿಂಹನೊಲೆಸೆದುದೇನು ॥
ಸ್ವಾಮಿತ್ವವಳಿದುದೆ ವಿರಾಮವೇತನಿಯಾಗಿ ।
ಗ್ರಾಮಸಿಂಹನ ತೆರದೊಳಲೆಯುತಿಹುದೇನು ॥ ೬ ॥

ಅರಸುತನಸದಂತಿರ್ದ ಮಹಿಮಾತಿಶಯದಿಂದ ।
ಮೆರೆದಾಗ ಬಹ ನಜರು ಕಾಣಿಕೆಗಳೆಂತು ॥
ವರುಷಗಳು ಮಿಾರೆ ಪದವಿಯು ಜಾರೆ ಸಂತೆಗೈ ।
ತರುತ ತರಕಾರಿಗಳ ಬೆಲೆಗೆ ತಹುದೆಂತು ॥ ೭ ॥

ವರ್ಗದಾರರ ಹಾಳುಹರಟೆಗೊಂದಲಕೆಲ್ಲ ।
ದುರ್ಗಮನೆ ಅಹುದದರೊಳಗೆ ಪಾಪವೆತ್ತ ॥
ಸ್ವರ್ಗಾಧಿಪತಿಯೆಡೆಗೆ ಬರಬಹುದೆ ಕೀಳು ಮನು ।
ಜರ್ಗೆ ತಕರಾರು ತಂಟೆಗಳ ಗಳಹುತ್ತ ॥ ೮ ॥

ಓಲಗಂಗೊಟ್ಟು, ಮಳೆಛಳಿಬೇಗೆಯೆನದೆ ಕಾ ।
ರ್ಯಾಲಯದಿ ಕುಳಿತೋಲೆಗಳ ಮುಗಿಸಿದುದಕೆ ॥
ಲೀಲೆಯಲಿ ರಜೆಯ ಸಹ ಭೋಗಿಸದೆ ಸ್ವಾಮಿಯನು ।
ಓಲಯ್ಸಿದುದಕಿನಿತು ಕಠಿನ ದಂಡನೆಯೇ ॥ ೯ ॥

ಕೆಟ್ಟ ಕರ್ಮವ ಗೈದುದಿಲ್ಲವೀ ಜನ್ಮದೊಳ ।
ಗಿಟ್ಟಿದ್ದನೇ ಸಂಚಿತವ ಕಟ್ಟಿ ಪಿಂತೆ ॥
ಪಟ್ಟವಿಲ್ಲದ ದೊರೆಯ ಕಷ್ಟನಿಷ್ಠುರಗಳನು ।
ದಿಟ್ಟಿಪುದಕಿಂತ ಬೇರಿಹುದೆ ಕಡುಚಿಂತೆ ॥ ೧೦ ॥

ದೇವರನು ಸದ್ಭಕ್ತಿಭಾವದಿಂ ಮನಮುಟ್ಟಿ ।
ಸೇವಿಸಲು ನಿತ್ಯ ದೇವತ್ವವೊದಗುವುದೈ ॥
ಕಾವ ದೊರೆಯನು ಸೇವಿಸಲು ನಿಚ್ಚ ದೊರೆತನವ ।
ನೀವುದಲ್ಲದೆ ಬಂದ ಬಟ್ಟೆಗಟ್ಟುವುದೇ ॥ ೧೧ ॥

ನೋಡುವವರಿಲ್ಲ ನೋಡಿದೊಡೆ ಗುರುತಿಸುವರಿ ।
ಲ್ಲಾಡುವವರಿಲ್ಲಾಡಿದೊಡೆ ಕೇಳ್ವರಿಲ್ಲ ॥
ನಾಡು ಬೇಡಾಗಿಹುದು ಬಾಳು ಗೋಳಾಗಿಹುದು ।
ನೀಡಯ್ಯ ಕರುಣಾಸಮುದ್ರ ತವ ದಯೆಯ ॥ ೧೨ ॥

ಆರಿ ಬತ್ತಿದ ಜಸವ ಕಳೆಗುಂದಿದೈಸಿರಿಯ |
ತೀರಿದಬ್ಬರ ಕಂದಿದಟ್ಟಹಾಸವನು ||
ಸಾರಿ ಬೆರಳಿಂದಣಕಿಸುವ ಚರಿತೆಯಂತೆ ಕ |
ಣ್ಣೀರ ಧಾರೆಯನೆಳೆವ ಬೇರೆ ಕತೆಯುಂಟೆ || ೧೩ ||

---

೨೬. ......ರೆ

ಗೆಳೆಯರೆಲ್ಲರು ಬುದ್ಧಿಗೇಡಿಗಳಾಗಿ ನಿನ್ನನು ತೊಲಗುತ |
ಹಳಿದು ದೂರಲು ಬಂದ ಕಷ್ಟಕೆ ನೀನು ಮತಿಗೆಡದಿದ್ದರೆ ||
ಅಳಿದೊಡಂ ಹೆರವರಿಗೆ ನಿನ್ನಯ ಭರವಸವು ನೀ ಕದಲದೆ |
ಮುಳಿಯದವರಲಿ ನಿನಗೆ ನಿನ್ನಲೆ ಧೈರ್ಯಗುಂದಿರದಿದ್ದರೆ ||
ಮೃತಿಯೆ ಕಾದಿಹುದೆನದೆ ಕಾಯುವೆಯಾದರನ್ಯರು ನಿರ್ದಯಾ |
ನೃತವನಾರೋಪಿಸಲು ನೀನೇ ಸುಳ್ಳನೆಬ್ಬಿಸದಿದ್ದರೆ ||
ಇತರರಹಿತವ ಬಗೆದೊಡಂ ಹಗೆ ನೀನು ಸಾಧಿಸದಿದ್ದರೆ |
ಮಿತಿಯನರಿಯದೆ ನಡೆನುಡಿಯೊಳತಿ ಸಾಧುಸಜ್ಜನನಾಗಲಿ ||
ಚತುರನಾಗಲಿ ನೀನು ತೋರಿಸಿಕೊಳ್ಳಲೆತ್ನಿಸದಿದ್ದರೆ |
ಕ್ಷಿತಿಯಿದೆಲ್ಲವು ನಿನ್ನದಾಗುತ ನೀನೆ ಮಾನವನೆನಿಸುವೆ || ೧ ||

ಕನಸಿನಲಿ ಸಂಕಲ್ಪವಾದೊಡಮನಿತರೊಳಡಗದಿದ್ದರೆ |
ಮನದಿ ಸಂಕಲ್ಪಿಸಿದೊಡಂ ಮನದಲ್ಲೆ ಕೊನೆಗೊಳದಿದ್ದರೆ ||
ಅನುಸರಿಪ ಪಂಥದಲಿ ಬಹ ವಿಜಯಾಪಜಯಗಳುವೊಂದೆಯೆಂ |
ದೆನುತ ದ್ವಂದ್ವಂಗಳನು ಜಯಿಸುತ ಫಲದ ಬಯಕೆಯ ತೊರೆದರೆ ||
ನನ್ನಿಯಲಿ ನೀನೆಂದುದನು ವಂಚಕರು ಹಿಸುಕುತ ಮರುಳರಂ |
ಬನ್ನಬಡಿಸಲಪಾರ್ಥಮಾಳ್ಪುದ ಕೇಳಿ ಸಹಿಸುವೆಯಾದರೆ ||
ತನ್ನ ಜೀವವ ನೆರೆದು ನಿರ್ಮಿಸಿದುದನು ಕಣ್ಣಿದಿರಲ್ಲಿಯೇ |
ಕುನ್ನಿಗಳು ಮುರಿದಿಕ್ಕುವುದ ನೀ ನೋಡಿ ರೇಗದೆ ತಳುವದೆ ||
ಉನ್ನತಿಗೆ ತರಲೆಳಸಿ ಪುನರಪಿ ಸೊಂಟಕಟ್ಟುವೆಯಾದರೆ |
ನಿನ್ನದಾಗುತ ಲೋಕವೆಲ್ಲವು ನೀನೆ ಮಾನವನೆನಿಸುವೆ || ೨ ||

ಬಂದ ದಾಯಕೆ ಹಿಗ್ಗಿ ಬೀಗದೆ ನಂಬಿ ದೇವರನೆಲ್ಲವಂ |
ತಂದು ಹೆದರದೆ ಜೀವದಾಟದೊಳೊತ್ತೆಯಿಡೆ ಬರೆ ನಷ್ಟವು ||
ಒಂದು ಮಾತನು ನಷ್ಟವನು ಕುರಿತೆತ್ತದೆಯೆ ಮುಂದರಿಯುತ |
ಕಂದಿ ಕುಂದದೆ ಮಂದಹಾಸದೆ ಮತ್ತೆ ತೊಡಗುವೆಯಾದರೆ ||
ಕ್ಷೀಣಿಸಿದೊಡಂ ದೇಹಬಲವು ಮನೋಬಲದ ಸಾರಥ್ಯದಿಂ |
ಜಾಣತನದಲಿ ತೇಜಿಗಳ ಹುರಿದುಂಬಿ ಹಿಡಿದಾ ಧ್ಯೇಯವಂ ||
ಮಾಣದೆಯೆ ಹಿಂಜರಿಯದೆಯೆ ದೃಢನಿಶ್ಚಯದಿ ನಿರ್ಧರಿಸಿದಾ |
ತಾಣಕೈದಿ ಕೃತಾರ್ಥನಾಗುವ ಗುರಿಯ ಬಿಟ್ಟಿರದಾವಗಂ ||
ಕಾಣಿಸಿ ಜಗದೊಳಾತ್ಮಶಕ್ತಿಯ ತೇಜವ ಬೆಳಗಿ ಮೆರೆದರೆ |
ಕ್ಷೋಣಿಯೆಲ್ಲವು ನಿನ್ನದಾಗುತ ನೀನೆ ಮಾನವನೆನಿಸುವೆ || ೩ ||

ಬಡಮನುಜರೊಡನಾಡಿದೊಡೆಯುಂ ಕೆಡಿಸಿಕೊಳ್ಳದೆ ಚರಿತೆಯ |
ನಡೆಯುವೆಡೆಯೊಳಗೊಡೆಯರೊಂದಿಗೆ ಬಡವರೆಡರನು ಮರೆಯದೆ ||
ಒಡೆಯದಿರೆ ನಿನ್ನೆದೆಯು ಮಿತ್ರರ ಶತ್ರುಗಳ ನಡೆವಳಿಕೆಯಿಂ |
ಇಡದೆ ಯಾರೊಳಗೆಂದಿಗಾದರು ತಾರತಮ್ಯ ವಿಶೇಷವಂ ||
ಸೋದರತ್ವದೊಳೆಲ್ಲ ಸಚರಾಚರವ ಸೇವಿಸುತಿದ್ದರೆ |
ಆದರದೊಳುಪಚರಿಸಿ ದೇಶವಿದೇಶವೆನ್ನದೆ ವಿಶ್ವವಂ ||
ಭೇದವಿಲ್ಲದೆ ಸಮತೆಯಿಂ ಸರ್ವರನು ಕಾಣುವೆಯಾದರೆ |
ಹಾದುಹೋಗುವ ನಿಮಿಷ ನಿಮಿಷವ ನೀನು ಮನದಣಿವಂದದಿ ||
ಗೇದ ಬೆವರಿನ ಕಾಯಕಷ್ಟದೆ ತುಂಬಿ ತುರುಕುವೆಯಾದರೆ |
ಮೇದಿನಿಯೆ ನಿನಗಾಗಿ ಮಗನೇ ನೀನೆ ಮಾನವನೆನಿಸುವೆ || ೪ ||

## ೨೭. ಕಳೆದು ಹೋದ ದಿನಗಳು

೧. ಕರುಳು ಕರಗಿ, ಬಿರಿದು ಎದೆಯು, ಕಣ್ಣಿಗೇರಿ ಕೂಡುತ,
ನೆರೆ ನಿರಾಶೆಗಡಲಿನಾಳದಿಂದ ಕುದಿದು ಬರುವುದು:
ಅರಿಯೆನಿದರ ಅರ್ಥವನ್ನು — ಬರಿದೆ ಹರಿಯುತಿರುವುದು,
ಶರದಕಾಲದಲ್ಲಿ ಬೆಳೆಯ ಸಿರಿಯ ಹೊಲದಿ ನೋಡುತ,
ಸುಳಿಯೆ ನೆನಹು ಮನದೊಳಾ
ಕಳೆದು ಹೋದ ದಿನಗಳಾ.

೨. ಬಂದು ನಿಂದು ಬಂಧುಬಾಂಧವರುಗಳೆಲ್ಲ ದೂರದೆ,
ತಿಂದು ತೇಗಿ, ನಲಿದು ಬೀಗಿ, ಹಬ್ಬಮಾಡಿ ಮನೆಯಲಿ,
ಹಿಂದೆ ಹೋಗುವಾಗ ಮೊಗವು ಕುಂದಿಯೆಲ್ಲ ಕೊನೆಯಲಿ
ಚಂದದಿಂದ ನೆಲಸಿ ಚಿತ್ತ ಭಿತ್ತಿಯಲಿ, ವಿಚಾರದಿ
ಹೊಳೆವುವೆಂತು ಪಟಗಳಾ
ಕಳೆದು ಹೋದ ದಿನಗಳಾ!

೩. ಹೋದ ಬಳಿಕ ಮನದೊಳೇಳ್ವ ಪ್ರಿಯೆಯ ಪ್ರಣಯಗೋಷ್ಠಿಯು—
ಖೇದದಿಂದ ಮಡಿದ ಮೇಲೆ ಸ್ಮರಿಪ ತಾಯ ನಲ್ಮೊಗಂ—
ಭೇದ ಬಂದ ಬಳಿಕ ನೆನೆವ ಗೆಳೆಯರಿತ್ತ ಸವಿಸೊಗಂ—
ಮೋದದಲಿ ವಿಷಾದ ಬೆರೆವ ವಿಧಿವಿಲಾಸ ಚೇಷ್ಟೆಯು!
ಅಳಿವೆ ಅಯ್ಯೊ ಬಾಳೊಳು
ಕಳೆದು ಹೋದ ದಿನಗಳು!

೪. ಸಮಯ ತೀರಿ ಬತ್ತಿಯಾರಿ ನಂದುತಿರಲು ದೀವಿಗೆ,
ಸವೆದ ದೇಹದಲ್ಲಿ ಕಿವುಡು ಕಿವಿಗೆ ಮಬ್ಬು ಕಣ್ಣಿಗೆ
ಅಮರಿ, ಕರೆಯುವಾಗ ಕೂಡಲೆಂದು ಮಣ್ಣು ಮಣ್ಣಿಗೆ,
ತಮದೊಳಿಹದ ಭ್ರಮೆಗಳಂತೆ ದಾರಿಗೆಟ್ಟ ಜೀವಿಗೆ—
ಅಳಲಗಡಲ ತೆರೆಗಳು
ಕಳೆದು ಹೋದ ದಿನಗಳು.

## ೨೮. ಧರ್ಮಕಾಗಿ

೧. "ಧರ್ಮಕಾಗಿ ಜೀವವನ್ನು ತೆತ್ತನಯ್ಯ, ಭಾಪುರೇ!
ಕರ್ಮಬದ್ಧರಾರು ಮಾಳ್ಪರನಿತು?—" ತಾಳೆಲೈ:
ಮರ್ಮವೇನು ಜೀವನದೊಳಗೆಂದು ನಿರ್ಧರಿಸಿದೆಯಾ?
ಧರ್ಮಕಾಗಿ ಬದುಕಿ ಬಾಳ್ವನೇನು ಪೇಳೆಲೈ.

೨. ಸಾವು ಸುಲಭ. ಲೋಭ ಮೋಹ ಜಂಭ ದಂಭ ದರ್ಪಕೆ
ಜೀವರೆನಿತಕಾಲ ಬಲಿಗಳಾಗಿ ಜವನಿಗೆ
ಸಾವರಲ್ಲ! ಅದರೊಳೆಲ್ಲ ಗರಿಮೆ ಹಿರಿಮೆ ಕೀರ್ತಿಯೇಂ?
ಯಾವ ಕಷ್ಟವೆನಿತು ಕಠಿನವಾದುದಿವನಿಗೆ?

೩. ಹಿಡಿದ ಧರ್ಮದೀಕ್ಷೆಯನ್ನು ನೆನಸುಕನಸೊಳಾವಗಂ
ಬಿಡದೆ, ಬದುಕಿ ಬಾಳಲೆಳಸಿ ಮುಂದರಿಸಿದನೇ?
ಪೊಡವಿ ತೆಗಳೆ ಸಂಗಡಿಗರು ಹಿಂಜರಿದೊಡಮಂಜದೆ
ಎಡರು ತೊಡರುಗಳನು ಜಯಿಸಲುಜ್ಜುಗಿಸಿದನೆ?

೪. ಅಂತೆ ಕಾದಿ ಹೋರಿ, ಹಾದಿ ತೋರಿ ಪಿಂತೆ ಬಹರಿಗೆ,
ಪಂತ ಮೆರೆದು ಶಾಂತಿವೆತ್ತ ಕತೆಯೆ ಬೇಕೆಲೈ!
ನಿಂತು ಧರ್ಮಕಾಗಿ ಬಾಳ್ದ ಹದನ ಬಿತ್ತರಿಪುದೆಲೈ!
ಎಂತು ಸತ್ತನೆಂಬ ವಾರ್ತೆಯಾರಿಗೇಕೆಲೈ?

---

## ೨೮. ಮಾಡಿದವನಿಗೆ ನೋಡಿದವನ ಕಾಣಿಕೆ

ಅವಲಕ್ಷಣವು ಚಿತ್ರವೇನಿದೆಂದೊದರಿದವ |
ನವಸರದಿ ನುಸುಳಿದನು ಜವನವನ ಕರಿಸೆ ||
ಅವನಿಯೊಳಗಲರಿನಲಿ ಪರಿಮಳದ ತೆರದೊಳದು |
ಹವಣುಮಾಡಿತು ಜನರ ಬಾಳ್ತೆಯನು ಸತತಂ || ೧ ||

ಗಾನವೇ? ಮುದಿಗೂಬೆ ಕೂಗಿದೆಂದಾ ಪಟುವು |
ಊನವನೆ ಸಾರಿ ತೆರಳಿದನವಧಿ ಮುಗಿದು ||
ಜೇನಿನಲಿ ಸಿಹಿಯಂತೆ ಮಾನವರ ಜೀವನದಿ |
ತಾನವದು ಕಲೆಕಲೆತು ಕೇಳಿಸುವುದನಿಶಂ || ೨ ||

ಪೋಲುನುಡಿಯಿದು ಕಾವ್ಯವೆಂತೆಂದವನ ಮಾತು |
ತೇಲಿ ಹೋಯಿತನಂತ ನಾದಬ್ರಹ್ಮದಲಿ ||
ಹಾಲಿನಲಿ ಸವಿಯಂತೆ ಜನತೆಯೊಳಗದು ಸೇರಿ |
ಕಾಲನನು ತುಳಿದು ನಿಂದಿಹುದಮರವಾಗಿ || ೩ ||

ಮಂದಿರವ ನೋಡಿ ಮೊಗತಿರುಗಿಸಿದ ಪಂಡಿತನು |
ಸಂದು ಹೋದನು ಕಾಲಲೀಲಾ ನಿಯಮದೆ ||
ಚಂದ ಮೈಯೊಳಗುಸಿರ ಬೆಡಗಿನಂತದು ನಿರುತ |
ಮುಂದಿಬದುಕಿನ ಸಂಸ್ಕೃತಿಯ ಬೆಳಗುತಿಹುದು || ೪ ||

ನೋಡುವನು ಮನುಜಮಾತ್ರನು, ಕಂದುಕುಂದುಗಳ |
ನಾಡಿ ತೋರಿಸಿ ಮತ್ತೆ ಸಾರುವನು ಲಯಕೆ ||
ಮಾಡಿದವನಳಿದೊಡಂ ನೆನಹಿನಲಿ ನೆಲೆ ನೆಲಸಿ |
ನಾಡಿನೊಳಗುಳಿಯುವನು ತನ್ನ ಕೃತಿಗಳಲಿ || ೫ ||

## ೩೦. ಜಗದ ಸೋಂಕು

೧. ಜಗದ ಸೋಂಕೆಮ್ಮನತಿ ಹಿಡಿದೆಳೆದು ಸೆಳೆದು
ಬಿಗಿದು, ಮಾಡಿತು ಸಪ್ಪೆ ನಮ್ಮ ಬಾಳ್ತೆಗಳ:
ಭಗವಂತನೆಮಗಿತ್ತ ಬುದ್ಧಿಶಕ್ತಿಗಳ
ಹಗಲಿರುಳು ದುಂದು ಮಾಳ್ಪೆವು ದುಡಿದು ಕಳೆದು.

೨. ಧವಳಾಂಶು ಬೆಳಬೆಳಗಿ ತಿಳಿಸೊದೆಯ ಸುರಿಯೆ,
ಲವಣಾಂಬುಧಿಯು ಪಾಲಗಡಲಾದ ಪರಿಯೆ!
ಪವನರಾಜನು ತನ್ನ ಲೀಲೆಗಳ ಮುಗಿಸೆ,
ಪವಡಿಸಿದ ಮಗುವಿನೋಲ್ ವಿರಮಿಸಿದ ಸೊಗಸೆ!

೩. ಮುಗುಳು ಹೂಗಳ ವರ್ಣಗಂಧಾತಿಶಯವೇ!
ಖಗಮೃಗ ನಿನಾದ ಸಂಗೀತಸಂಚಯವೇ!
ಬಗೆಗೆ ನಾಟದು. ಅಂದ ಚಂದ ಸವಿಯೊಂದೂ
ಸೊಗಯಿಸದು. ಕದಲದೀ ಗೊಡ್ಡು ಮನಸೆಂದೂ.

೪. ಕೋಮಲತೆ ಶಾಂತಿ ಲಲಿತತೆಯೆಮಗೆ ಸಲ್ಲ.
ರೋಮಾಂಚವಾಗುವೆದೆ ಕಲ್ಲಾದುದಲ್ಲ!
ಭೂಮಿತಾಯವಳ ಮಕ್ಕಳು ನಮ್ಮೊಳೆಲ್ಲ
ಸಾಮರಸ್ಯದ ಸುಳಿವು ಲವಲೇಶವಿಲ್ಲ.

೫. ಹುಲ್ಲೆ ಹುಲಿಯೊಡನಾಡಿದಾ ತಪೋವನದಾ,
ಕಲ್ಲು ಹೆಣ್ಣಾದುದರ, ಜಲಧಿಮಂಥನದಾ
ಎಲ್ಲ ತಿರುಳರಿವ ತಿಳಿ ನಂಬುಗೆಯ ನೀಡೈ!
ಬಲ್ಲವರ ಜಾಣ್ಮೆಯಾ ಸೋಗೆನಗೆ ಬೇಡೈ!

೬. ಸಹಿಸದೈ, ಸಾಕು ನವನಾಗರಿಕ ಭಾವ.
ಮಹಿಯೊಳಿಹ ರೂಪರಸಗಂಧ ನಾದಗಳ
ಸಹಜಸಾಮ್ರಾಜ್ಯದಲಿ ನಲಿವ ನಲವುಗಳ
ಸಿಹಿಯುಂಬ ಸರಳತೆಯ ಕರುಣಿಸೈ, ದೇವ!

---

## ೩೧. ನುಡಿಗಳಾ ಹಗೆ ಕಿತ್ತುಹಾಕೈ

೧.

ಮುರಿಯುದೊಳ್ಗನ್ನಡಮ್ಮನ ಬೆನ್ನು, ಗೆಳೆಯರಿರ,
ಹೊರನುಡಿಯ ಹೊರೆಯಿಂದ ಬಲು ಕುಗ್ಗಿ ಬಗ್ಗಿ!
ಅರಸುನುಡಿಯೆಂದೊಂದು, ರಾಷ್ಟ್ರದುಲಿಯೆಂದೊಂದು,
ಸುರರ ನುಡಿಯೆಂದೊಂದು ಹತ್ತೊತ್ತಿ ಜಗ್ಗಿ
ಬರಲಿ ನುಡಿಮಕ್ಕಳುಗಳಿರಲಿ ಮನೆಯೊಳಗೆ ಮೇಣ್
ಹೊರಗಂಗಳದೊಳಗೋಡಾಡುತಲಿ ನುಗ್ಗಿ:
ಇರಲು ಕಣ್ಮುಂದೆ ನಗುಮಕ್ಕಳಾಟಗಳದುವೆ
ಸಿರಿಗನ್ನಡಮ್ಮನಾ ಬಾಳುವೆಯ ಸುಗ್ಗಿ!

೨.

ತಾಯ ಮೊಲೆಹಾಲಿನೊಂದಿಗೆ ಸೇವಿಸಿದ ನುಡಿಯ
ಸಾಯ ಬಿಡುವೆವೆ ನಮ್ಮ ಬಾಳ ದಾಯವನು?
ಕಾಯವಿರುವನ್ನೆಗಂ ನಮ್ಮ ಗತಿಪಥದಿಂದ
ಮಾಯವಾಗಲು ಬಿಡುವೆವೇ ಕನ್ನಡವನು?
ಬಾಯ ಕಟ್ಟಲು ಕನ್ನಡಿಗರ ಕನ್ನಡಕೆ ಪರ
ಕೀಯರೇಂ ಪಡೆದಿಹರೆ ಸಂಚಕಾರವನು?
ರಾಯನುಡಿ ರಾಯಭಾರಕೆ; ರಾಷ್ಟ್ರದುಲಿ ನಡಿಸ
ಲಾಯತದಿ ಕೊಳುಕೊಡೆಯ ಸರ್ವಕಾರ್ಯವನು.

೩.

ತಮ್ಮ ಮರಿಗಳು ಹೊನ್ನಮರಿಗಳೆಂದಬ್ಬೆಯರು
ನೆಮ್ಮಿದೊಡಮಡಹಾಯಬೇಕೆ ಮಕ್ಕಳಿಗೆ?
ನಮ್ಮ ತಾಯ್ನುಮಗೆ ಮೇಲಾದೊಡಂ ನಲ್ಗನ್ನ
ಡಮ್ಮನಂ ತಬ್ಬಿರಲೆ ಬಿಡದೊಂದು ಗಳಿಗೆ?
ಕಮ್ಮಲರನೂರ ಹೊರಬಯಲಿನಲಿ ಸೇವಿಸದೆ
ಸುಮ್ಮನಿರಬೇಕೇನು ಮನೆಕೊಠಡಿಯೊಳಗೆ?
ಒಮ್ಮೆಯುಂ ಪುಗದಿರಲೆ ಹಿರಿದಾಸೆ ಹಟತೊಟ್ಟು
ನಿಮ್ಮವರು ಹಿರಿನಾಡತಾಯಿಯಾ ಬಳಿಗೆ?

೪.

ಇನ್ನೆಗಂ ಭರತವರ್ಷಮದೊಂದೆಯಾಗಿದ್ದು
ದಿನ್ನುಳಿಯಬೇಡವೇ ವಿಶ್ವದೊಳಗೊಂದೆ?
ಕನ್ನಡರವಾಂಧ್ರ ಗುರ್ಜರ ಹಿಂದಿವಂಗಾದಿ
ಯನ್ನೆಣಿಸಬೇಕದರ ಪಲವಂಗವೆಂದೆ.
ಮುನ್ನಡೆವನೆಲ್ಲರೊಡನಾಡಿ ತಿದ್ದಲುಬೇಕು
ತನ್ನ ನಡೆತಿಳಿವುಗಳ ಸತ್ಸಂಗದಿಂದೆ:
ಅನ್ನಿಗರ ಜತೆಯು ಚಳವಳಿಗೊಂದೆ ರಾಷ್ಟ್ರದುಲಿ
ಯೆನ್ನುವುದು ಬೇಕದನು ಕಲಿತು ನಡೆ ಮುಂದೆ!

೫.

ಲೇಶವುಂ ತಪ್ಪದೆವ್ಮೊಳಬಾಳುವೆಯ ಸನ್ನಿ
ವೇಶಗಳಿಗೊಳ್ಗನ್ನಡವೆ— ಬೇರೆಯೇಕೈ?
ಈಶೋಪದೇಶ ತತ್ತ್ವಜ್ಞಾನಮೂಲ ಸಂ
ದೇಶಗಳಿಗೆಲ್ಲಮರವಾಣಿಯೇ ಬೇಕೈ.
ದೇಶಜನಪದದಾಳ್ಕೆ ಬಾಳ್ಕೆಗಳ ಸರ್ವಾವ
ಕಾಶಪೂರ್ತಿಗೆ ರಾಷ್ಟ್ರದುಲಿಯೊಂದೆ ಸಾಕೈ.
ಕ್ಲೇಶವೇತರದಣ್ಣ? ಈ ಹೊಸಗೆ ಪಸರಿಸಾ
ವೇಶದಿಂ ನುಡಿಗಳಾ ಹಗೆ ಕಿತ್ತು ಹಾಕೈ!

## ೩೨. ಸಾರಸ್ವತನ ಬಿನ್ನಪ

ಭಾರತದೆ ನಿನಗೆ ಹೆಸರಾಯ್ತೆ? ನಿನ್ನಿಂದೆ,
ಭಾರತಿಯೆ, ಭಾರತಕೆ ಹೆಸರಾಯ್ತು ಹಿಂದೆ?
ಶಾರದಾಂಬೆಯೆ, ನಮಗೆ ಹೆಸರಿತ್ತ ತಾಯೆ,
ಸಾರಸ್ವತನ ಬಿನ್ನಪವ ಕೇಳಿ ಕಾಯೆ || ೧ ||

ಅಂದೆಮಗೆ ಜೀವನವನಿತ್ತವಳು ಪಿಂತೆ
ಇಂದಲ್ಲಿ ಗುಪ್ತವಾಹಿನಿಯಾದಳಂತೆ.
ತಾಯಿ ನೀನಾದೊಡಂ, ಸಾಕಿದವಳಾಕೆ—
ಕಾಯುವವಳಿಲ್ಲದಿರೆ, ಬೆಳೆದ ಮನೆಯೇಕೆ? || ೨ ||

ಕಾವರಿಲ್ಲದೆ ತೊಳಲಿ ಹುಟ್ಟೂರ ಬಿಟ್ಟು,
ಗೋವೆಯಲಿ ಕುಲದೇವತೆಗಳ ಕುರುಪಿಟ್ಟು,
ಅಲೆದಾಡಿ ಕೊಂಕಣದಿ, ಸುಳಿಸುಳಿದು ಬಳಲಿ,
ನೆಲಸಿದೆವು ತುಳುವ ಕನ್ನಡ ನಾಡುಗಳಲಿ || ೩ ||

ಹೀರುವಂದದಿ ತಾನು ಹರಿವ ತಾವಿಂದ
ಸಾರಸತ್ವವ ನೀರು, ನಾವಿಳಿದು ಬಂದ
ಊರುಗಳ ನಡೆನುಡಿಗಳನೆ ಕಲಿತುಕೊಂಡು,
ಹೋರಾಡಿ, ಬಾಳಿ ಬದುಕಿದೆವು ಗೇಯ್ದುಂಡು || ೪ ||

ಮನೆಯೊಳಗೆ ನಾವಾಡುವಾ ನುಡಿಯದೊಂದು;
ಜನರೊಳಗೆ ನೆರೆಕರೆಯ ನುಡಿಯು ಮತ್ತೊಂದು;
ವ್ಯಾವಹಾರಿಕ ಕಾರ್ಯಗಳೊಳಗಿನ್ನೊಂದು;
ಜೀವನದ ಪಥದೊಳಗೆ ಮತ್ತೆ ಬೇರೊಂದು || ೫ ||

ಹಾವ ಭಾವ ವಿಲಾಸ ನಮ್ಮವೆಂದಿಲ್ಲ;
ನಾವಿದ್ದೆಡೆಯ ರೀತಿಯಹುದು ನಮಗೆಲ್ಲ.
ಉಡುಗೆ ತೊಡುಗೆಗಳೆಮ್ಮವೆಂದಿಲ್ಲವಲ್ಲ!
ನಡತೆ ನಮ್ಮದು ಬೇರೆಯೆಂದರದು ಸಲ್ಲ || ೬ ||

ಇಳೆಯ ಸತ್ವವ ಪೀರ್ದೊಡಂ ನೀರು, ಜನಕೆ
ಬೆಳೆಯ ಸುಗ್ಗಿಯನೀವ ತೆರದೊಳನುದಿನಕೆ,
ಹೆರವರಿಗೆ ಹಿತವನೆಸಗುವುದರಲೆ ನಮ್ಮ
ಪರಮ ಕಲ್ಯಾಣವನು ಸಾಧಿಸಿದೆವಮ್ಮ ||೭||

ವಿಪ್ರ ವಿಪ್ರೇತರರು ಹೋರುತಿರಲಿಂದು
ಸ್ವಪ್ರತಿಷ್ಠೆಯ ಸಾಧಿಸಲು ಹಿಂದುಮುಂದು,
ಹಾರುವರು ನಾವಲ್ಲನೆಂದು ಹಾರುವರು
ಸಾರುವರು ನಾವ್ ಪಾರ್ವರೆಂದಿತರರವರು ||೮||

ಕಡುಕಿಚ್ಚಿನಿಂದಮಿತ್ತಂಡಗಳುಮಿಂತು
ಹೊಡೆದೋಡಿಸುತ್ತಿರಲು, ಕೆಡದಿರ್ಪುದೆಂತು?
ಸರಸತಿಯ ಸೇವೆಯನು ಮಾಡಿದವನಾಗಿ,
ಇರಬೇಕೆ, ಇರಲೆ, ಕೇವಲ ನಿರುದ್ಯೋಗಿ? ||೯||

ಮತವನೆಣಿಸಲ್ಕಿರುವುದದು ಮೊದಲೆ ಹಿಂದು
ಅತಿಕಷ್ಟವನು ತಪ್ಪಿಸಲ್ಕೇನು ಮುಂದು?
ನುತಿಪೆ ವಿನಯದೆ ನಿನ್ನ ನೀನೆ ಗತಿಯೆಂದು:
ಪತಿತರನು ಸಲಹು ಕಷ್ಟದೊಳೊದಗಿ ಬಂದು ||೧೦||

ದುಡಿವ ಶಕ್ತಿಯ ಮಾರ್ದನೀಯೆನ್ನಲೊಲ್ಲೆ;
ಪಡೆವ ಯೋಗ್ಯತೆ ಮೀರಿ ಬೇಡೆಂಬೆನಲ್ಲೆ?
ಸಿಕ್ಕತಕ್ಕುದು ದೊರಕೆ, ಸಾಕನಿತರಲ್ಲೆ —
ತಕ್ಕುದೆಂಬುದಕೆ ಸಂತುಷ್ಟನಿರಬಲ್ಲೆ ||೧೧||

ಬರಹದಲಿ ನುರಿತವರು ಸೋಲಲಿಲ್ಲೆಂಬಾ,
ಸರಸತಿಯ ನಂಬಿದವರಳಿಯಲಿಲ್ಲೆಂಬಾ,
ಪರಸೇವೆ ಗೆಯ್ವವರು ಕೆಡರು, ಕೆಡರೆಂಬಾ
ವರವಿತ್ತು ಕಾಪಾಡು, ದೇವಿ ಜಗದಂಬಾ ||೧೨||

———————

## ೩೩. ನಾಗಕ್ಕ ನಕ್ಕಾಗ

ನಿಮ್ಮಮ್ಮ ನಗುವೇನು ಹಿರಿದೆಂದು ತಿಳಿದೆ?
ಹೊಮ್ಮಿದೊಡನಲೆಯಂತೆ ಪೋಪುದೊಡೆದಳಿದೆ!
ನಗೆಯ ಸೊಬಗಿನ ಸೊಗಸ ಸುಗ್ಗಿ ನೋಡುವೆಯಾ?
ನಗುವಳಗೊ ನಾಗಕ್ಕ! ನೋಡಾ ಚೆಲುವೆಯಾ!

ಮೆಲ್ಲನೊಳಗಡೆಯೆಲ್ಲೊ ಜನಿಸಿ ಮೇಲೇರಿ
ಗಲ್ಲಗಳ ಗುಳಿಗಳಲಿ ಸುಳಿಸುಳಿದು ಜೀರಿ
ಪುಟ್ಟ ಹೂಂಕಾರವಾಗಿರ್ದುದೆಂತುಬ್ಬಿ
ಕಟ್ಟಬ್ಬರದೆ ಬೆಳೆದು ಮೈಯಾರೆ ಹಬ್ಬಿ,
ಕೇಕೆಗಳ ಗೊನೆಗೊನೆಗಳೊಡನೆ ಹೊರಗುದುರಿ,
ಆ ಕಣ್ಗಳರೆದೆರೆದ ತೆರದೊಳಿವೆ ಮುದುರಿ.
ನಗೆಯ ಸುಗ್ಗಿಯ ಸೊಬಗ ನೋಡ ಬಯಸುವಿಯಾ?
ನಗುವಳಗೊ ನಾಗಕ್ಕ! ನೋಡದರ ಸವಿಯಾ!

ಹಣೆ ಕದಪು ಚುಬುಕದಲಿ ಮಡಿ ನಿರಿಗೆ ಬಿದ್ದು,
ಕುಣಿ ಸುಕ್ಕು ದಿಬ್ಬ ತೆವರ್ಗಳು ಕಾಂಬವೆದ್ದು.
ಧರೆಯ ಜಠರದೊಳೊಗೆದು ಕುದಿದೊಳಗಿನಿಂದ
ಕುರುಡು ಹಾವಳಿಗೈವ ಲಯಚಂಡಿಯಿಂದ
ಬೆಟ್ಟವಿರ್ದುದು ಕರಗಿ ಕಣಿವೆ ಬಯಲಾಗಿ,
ಬಟ್ಟ ಬಯಲಿರ್ದಲ್ಲಿ ಬೆಟ್ಟಗಳು ಬೀಗಿ,
ವಿವರಗೊಳಿಸುವ ವಿಪ್ಲವವ ನೋಡದವನು
ಅವಲೋಕಿಸುವುದಿಲ್ಲೆ ಸೆವ ತಾಂಡವವನು!

ಭೂಕಂಪದುತ್ಪಾತದಿಂದಲುಗುವಂತೆ,
ಆಕೆ ಬಾಗುತ ತೂಗುವಳು ಪಿಂತೆ ಮುಂತೆ.
ಎಲೆಗೊಡುಗಳು ಚಂಡಮಾರುತಕೆ ಮರದಿ
ಬಲಿದು ನಲಿನಲಿದು ಚಿಗಿಚಿಗಿಯುತಿಹ ತೆರದಿ

ಅಗೊ! ವಸನದರೆಮುಸುಕಿನಂತರಂಗದಲಿ
ನೆಗೆಯುತಿದೆ ಹೆಣ್ಣೆದೆಯು ನಡುಕದಲಿ ಕದಲಿ!
ತಕ್ಕಂತೆ ನಕ್ಕ ಸವಿ ಸವಿಯಲೆಳಸಿದೆಯಾ?
ನಕ್ಕಳಗೊ! ನೋಡಾ ಕಲಾವಿಶಾರದೆಯಾ!

ಜ್ವಾಲಾಮುಖಿಯು ಕೆರಳಲದರ ಮೊಗದಿಂದ
ಆ ಲೋಹರಸವುಕ್ಕಿ ಸುರಿವ ಪರಿಯಿಂದ,
ಅನ್ನೆಗಂ ಕಟ್ಟಿ ನಿಲಿಸಿದ ಹಾಸ್ಯರಸವು
ತನ್ನ ಕಟ್ಟೆಯ ಬಿರಿದು ಹರಿವಾ ರಭಸವು
ಬಣ್ಣಿಸಲ್ಕಸದಳವು. ಬಣ್ಣಿಸುವುದೇಕೆ?
ಕಣ್ಣಹಬ್ಬದ ಸಿರಿಯ ಕೇಳಿದರೆ ಸಾಕೆ?
ಗಹಗಹಿಸುವುದು ಮಾತ್ರವಲ್ತೀ ಹದನವು—
ಗಹನವಿದು! ಸುಲಲಿತಕಲಾಪ್ರದರ್ಶನವು!

ತಡೆಸಲಾಗದ ಸುಯ್ಲು ಹೊಯ್ಲಿನಲಿ ಸಿಕ್ಕಿ
ಕುಡುಗಿದಂತಾಗಿ ಬಾಯ್ಬಿಡುತಿಹಳು ಬಿಕ್ಕಿ.
ಅಳವಡಿಸಲಾರದಿರೆ, ಮೊಗದಿ ಕೆಂಪೇರಿ,
ಕಿಳಿರುವಳು, ಮೈಮುರಿದುಕೊಳ್ಳುವಳು, ಚೀರಿ.
ಅಲ್ಲಿ ಗುಡುಗಿತು ಧಾತು, ಕಂದಿ ಚೇತನವು,
ಸೊಲ್ಲಡಗಿ, ಕಣ್ಮುಚ್ಚಲೊರಗಿದುದು ತನುವು.
ಸೂಸುತಿರಲಸವಸದ ಬೆವರು ಮೈಯಿಂದ,
ಬೀಸಿಕೊಳ್ವಳು ಸೆರಗ ಸೋತ ಕೈಯಿಂದ.

ನಿಮ್ಮೆಮ್ಮ ನಗುವೇನು ಹಿರಿದೆಂದು ತಿಳಿದೆ?
ಹೊಮ್ಮಿದೊಡನಲೆಯಂತೆ ಪೋದುದೊಡೆದಳಿದೆ!
ಮಿಕ್ಕವರ ಮಾತೇತಕವಳ ನೋಡಿದೆಯಾ
ನಕ್ಕ ನಾಗಕ್ಕನನು ಹಾಸಕೋವಿದೆಯಾ!

೩೪. "ಪರರಿಗುಪಕಾರಕಲ್ತೇ ಶರೀರವಿದು?"

**ಹಳೆ ಕಥೆಯ ಹೊಸ ಕಥನ**

(ಅಪಾದಿತನ ಅಂಜೋಣ)

ಸಿರಿಯನೊಲಿಸುತ್ತ ವಶಗೊಳಿಸಿರ್ದ ಪಟುವು
ಸರಸತಿಯ ಕೇಳ್ವನಲ್ಲೆಂಬುದಿದು ದಿಟವು.
ಶಾರದೆಯನಿತ್ತಿಹರು ತಿಳಿದವರು ವಿಧಿಗೆ;
ಬಾರಳಾಕೆಯು ಕುಬೇರನ ಮನೆಯ ನಿಧಿಗೆ.

ಇರಬಹುದು ಧನಿಕನಲಿ ಪುಸ್ತಕಾಲಯವು.
ದೊರೆವುದೇನೋದದಿರೆ ಗ್ರಂಥಪರಿಚಯವು?
ಮನೆಯ ಯಜಮಾನನೆಂದುಂ ಹಣಕಿ ನೋಡಂ.
ಎನಿತು ಪರೆಗಳ ಕಟ್ಟಿಹನು ನೋಡು ಜೇಡಂ!
ಅದರಿಂದ ನನಗೊಬ್ಬನಿಗೆ ಸೌಖ್ಯವಹುದು:
ಹೆದರಿಸುವರಿಲ್ಲ— ನೆಮ್ಮದಿಯೊಳಿರಬಹುದು.
ಅಂತಿರ್ದೆನಾನೊಮ್ಮೆ ಪುಸ್ತಕವ ಹಿಡಿದು.
ಸಂತಸವ "ಚಾಣಕ್ಯತಂತ್ರ"ದಲಿ ಪಡೆದು.

ಒಡನಾಗ ಕಂಡೆನೊಬ್ಬಳ ಪತಂಗಿಕೆಯ.
ಕಡು ಮೌನದಿಂ ತೋರಿ ಸಹಜ ನಾಚಿಕೆಯ,
ನನ್ನಿಂದ ನಸುದೂರವಿರ್ದು ತಲೆವಾಗಿ
ಕನ್ನೆ ನಿಲಲಾತುರವ ನಾಂ ತಳೆದನಾಗಿ
ಕರೆದವಳ "ಏನಮ್ಮ? ಏಕಿಲ್ಲಿ ಬಂದೆ?
ಇರುವುದೇನೆನ್ನೊಡನೆ ಕೆಲಸ ನಿನಗೆ"ಂದೆ.
ಅಂತುಸಿರಲೇನೆಂಬೆನವಳ ಕಣ್ಣಿಂದ
ಬಂತು ಜಲಧಾರೆ ನೆರೆನೀರ ಪರಿಯಿಂದ.

ನೆರೆಹೊಯ್ಲು ನಿಂತು, ಮಾತಾಡಲನುವಾಗೆ,
ಒರೆದಳೈ ಸರಳರೆದೆ ಕರಗಿಸುವ ಹಾಗೆ:
"ಮರಿಗಳಿರ್ದುವು ಹತ್ತು ಮಂದಿಯಂದೆನಗೆ—
ಇರದೆ ಪೋದುವು ಮಾರಿ ಬಡೆದಂತೆ ಮನೆಗೆ!

ಹೊರಗೆ ಹೋದವಳು ನೋಡಲು ಹಿಂದೆ ಬಂದು,
ಇರಲಿಲ್ಲ! ಪೇಳ್ವರಾರೇನಾದುದೆಂದು?
ಮನೆಯ ಯಜಮಾನರನು ಕಳೆದಿಹೆನು ಮೊದಲೆ.
ಕನಸಿನಂತವರೊಮ್ಮೆ ನನಗೆ ತಿಳಿಯದಲೆ
ತೋರದಾದರು. ನಮ್ಮ ಹಗೆಯೊಯ್ದುದೇನು?
ಆರ ಕೇಳುವೆನೂರೊಳರಸಿದೆನು ನಾನು.
ಹಬ್ಬ ಹುಣ್ಣಿಮೆಯಪ್ಪುದೂರಿನೊಳಗೆಲ್ಲ;
ಒಬ್ಬಳಿಗೆನಗೆ ಮಹಾಲಯವೆ! ಪೆರತಿಲ್ಲ."

ಮುಂಜಾನೆಯಿಂದ ನನಗಶನವಿರಲಿಲ್ಲ.
ಸಂಜೆಗಿವಳನು ಕಾಣಲೊಡಲುರಿದುದಲ್ಲ!

"ಮರುಗಬೇಡೌ! ಮಹಾಲಯಮಿರ್ದೊಡಿಂದು,
ವರ ಮಹಾನವಮಿ ಸಂಭ್ರಮವಹುದು ಮುಂದು.
ಹಬ್ಬ ತಪ್ಪಿದೊಡೇನು? ಹೋಳಿಗೆಯು ಸಿಗದೆ?
ತಬ್ಬಿಬ್ಬುಗೊಳದೆ ಕಾಲವ ಮುಗಿಸು ಸೊಗದೆ"—
ಎಂದು ನುಡಿದೆನ್ನ ಭೋಜನಶಾಲೆಯೊಳಗೆ
ಚಂದದಿಂ ಬರಿಸಿ ಸೇವಿಸಿದೆನರೆಗಳಿಗೆ.

ಉರಿ ನೊಂದಿ, ಮೆಯ್ದಣಿಯೆ ಸವಿಯೂಟ ಸವಿದು,
"ಪರರಿಗುಪಕಾರಕಲ್ತೇ ಶರೀರವಿದು"
ಎಂಬ ತತ್ತ್ವವನೆಲ್ಲ ಲೋಗರಲಿ ಬೀರಿ
ನಂಬಿಸುವುದಕೆ ಬರೆದೆನೀ ಕಥೆಯ ಸಾರಿ.

ಆದೊಡಂ ತೊಡಕಾದುದರಗಲೌತನವು:
ಖೇದದಿಂದಿತ್ತು ಬಲು ನಾರವಳ ತನುವು!
ಅಳಬೇಕೆ? ನಗಬೇಕೆ?—ನಾಂ ಪೇಳ್ವುದೇನು?
ಅಳಿದೊಡಮವಳ ಜೀವವೊಂದುಳಿದೆ ನಾನು!

ಭಾವಿಸಲ್ಕಾದಪುದಿದೆಂತು ದುಷ್ಕರ್ಮಂ?
ಜೀವಿ ಜೀವಿಯ ತಿನ್ನುವುದೆ ಜಗದ ಧರ್ಮಂ.
ನೀವೆಣಿಸಬಹುದೆನ್ನ ಕುಟಿಲನಲ್ಪಜ್ಞಂ—
ಜೀವಿ ಜೀವಿಯ ತಿಂಬುದೆಂದ ಸರ್ವಜ್ಞಂ!

---

## ೩೫. ಬೇಸಗೆಯ ಮಳೆಯಾಟ

ಊರೆಲ್ಲ ಉರಿಯುತಿರ್ದುದು ದಾಹದಿಂದ ।
ನೀರಿರದೆ ಸುಡುತಿತ್ತು ಕಡುಬೇಗೆಯಿಂದ ॥
ಆರಿರ್ದುವೆಲ್ಲ ಕೆರೆಕುಂಟೆ ಬಾವಿಗಳು ।
ತಾರಿದುವು ಬಳ್ಳಿಗಿಡಮರದ ತೋಟಗಳು ॥

ನಾಲಗೆಯ ಹೊರಗಿಳಿಸಿ ತೆರೆದಿಟ್ಟು ಬಾಯಿ ।
ಜೋಲು ಹಾಕುತ ಬಸವಳಿದುದು ಮನೆನಾಯಿ ॥
ಉರಿಗೆ ಮನೆಬೆಕ್ಕು ಬೆನ್ನನು ತಿಕ್ಕಿ ನೆಲಕೆ ।
ಹೊರಳಾಡುತಿರ್ದುದಡಿಗಡಿಗೆಡಕೆ ಬಲಕೆ ॥

ಮರದಡಿಯಿದೆಂದು ಮನೆಗೋವುಗಳು ಬರಲು ।
ನೆರಳಿರ್ದೊಡಂ, ಗಾಳಿಯಲುಗಾಡದಿರಲು ॥
ಮೊದಲೆ ಕಾದಿರ್ದ ಭೂಮಿಯಲಿ ಸೊಗವೆಂತು ।
ಕುದಿವ ವಾತಾವರಣದೊಳಗೆ ತಂಪೆಂತು ॥
ಗರಿಕೆಯಿಲ್ಲದೆ ನೀರ ಕಾಣದಿರೆ ತೊಳಲಿ ।
ಬರಿದಾಗಿ ಮಲಕುಹಾಕಿದುವು ಬಳಬಳಲಿ ॥

ಬೆವರಿಳಿಪ ಗೇಯ್ಮೆಯಾ ಸವಿಯನರಿಯದರು ।
ಸವಿಯೆ? ಬೆವರುಪ್ಪೆಂದು ಸವಿದು ನೋಡಿದರು ॥
ಕಾಯಕಷ್ಟದೆ ಸುರಿವ ಬೆವರ ಧಾರೆಗಳ ।
ಆಯಾಸವೇನೆಂಬೆ ಕಷ್ಟಜೀವಿಗಳ ॥
ಬೀಸಣಿಗೆ ಬೀಸಿಕೊಂಬಾತನಾರಿದನು ।
ಬೀಸಿಕೊಳದವನು ಬೆವರಾಗಿ ಕರಗಿದನು ॥
ಉರಿದು ಬೇಗುದಿಗೊಂಡು ಬೆಂಡಹುದು ಲೇಸೆ ।
ಕರಗಿ ಬೆವರಾಗಿ ಕೊಳೆ ನಾರುವುದು ಲೇಸೆ ॥

ಮಳೆಸಾಕು, ಬೇಡವೆಂದಾಗ ನೆರೆ ಬಂದು ।
ಮುಳುಗಿಸುತ ನಾಶಪಡಿಸಿದುದೂರನಂದು ॥
ಬೇಕು ಬೇಕೆಂದು ಮೊರೆಯಿಡಲು ಜನರಿಂದು ।
ಏಕಿಂತು ಕಾಡುವುದು ಬೇಗೆಯಿಂ ಕೊಂದು ॥

ಹೀಗಿರಲು ನಾಡಿನೊಳಗೊಮ್ಮೆ ನಡುಹಗಲು ।
ಆಗಸದಿ ಮುಗಿಲೊಡ್ಡು ಕವಿಯುತ ಮುಸಗಲು ॥
ಗುಡುಗೆದ್ದು ಗುಡುಗೆ ಬಾಗಲು ಕಿಟಿಕಿ ಕದಲಿ ।
ಕಡುಕತ್ತಲಾದುದೈ ಗ್ರಹಣದಂದದಲಿ ॥

ಬಂತು ಮಳೆ ಬಂತೆಂದು ನಾಡೆಲ್ಲ ನೋಡಿ ।
ಸಂತಸದೆ ನಿಟ್ಟುಸಿರ ಸುಯ್ದು ನಲಿದಾಡಿ ॥
ಹೊರಗೆ ನಿಂತವರೋಡಿದರು ಮನೆಯ ಬಳಿಗೆ ।
ಸುರಿವುದಗೊ ಮಳೆಯೆಂದರರೆಗಳಿಗೆಯೊಳಗೆ ॥

ಬೇಸಗೆಯ ಬೇಗೆಯೆಂಬುದು ಬೀಗಿ ಕನಲಿ ।
ತಾಸೆರಡು ಕಳೆದುವೈ ಮುಗಿಲ ಮುಸುಕಿನಲಿ ॥
ಕದ ಮುಚ್ಚಲೆಂತು ಕಾಯ್ಸುವುದಗಿಷ್ಟಿಕೆಯು ।
ಕುದಿಕುದಿಯುತಂತೆ ಹೆಚ್ಚಿತು ನಾಡ ಸೆಕೆಯು ॥
ಗುಡುಗಿನಾ ಸದ್ದುಡುಗಿ ಮುಗಿಲು ಪಾರಿದುದು ।
ಅಡಗಿರ್ದ ನೇಸರಿದಿರಿನಲಿ ತೋರಿದುದು ॥
ರೇವತಿಯ ಮಳೆಯ ನಂಬಿದರೆ ಬದುಕುಂಟೆ ।
ಏವೇಳ್ವೆ? ಬೇಸಗೆಯ ಮೋಸಕೆಣೆಯುಂಟೆ? ॥

ಹೇಳುವರು, ಸಾರುವರು, ವಹಿಸಿಕೊಳ್ಳುವರು ।
ಏಳುವರು ಕೆಯ್ಚಾಚಿ ಸೊಂಟಕಟ್ಟುವರು ॥
ಸನ್ನದ್ಧರಾಗಿ, ಮಾಡೋಣವೆನ್ನುವರು ।
ಇನ್ನೇನು? ಮಾಡಿದಂತೆಂದೆ ಎಣಿಸುವರು ॥
ಒಮ್ಮೆ ಕೆಯ್ಯಿಕ್ಕಿ ಸವರಣೆಯ ಮಾಡುವರು ।
ಸುಮ್ಮನಾಗುತ ಮತ್ತೆ ಬಾಕಿ ಹಾಕುವರು ॥
ಹೊತ್ತುಕೊಳ್ವರು, ಸಿದ್ಧರಪ್ಪೆವೆನ್ನುವರು ।
ಮತ್ತೆಮತ್ತೆನ್ನುತಲೆ ಮುಂದೆ ದೂಡುವರು ॥
ಅತ್ತಿತ್ತ ನೋಡುವರು, ಚೀರಿ ಕರೆಯುವರು ।
ಎತ್ತಿದಾ ಭಾರವನು ಕೆಳಗೆ ಮಡಗುವರು ॥

ನಿಲ್ಲುವರು, ತಳುಹುವರು, ಬಳಿಕ ತಳುಗುವರು ।
ಅಲ್ಲೆ ಬಿಟ್ಟಿಲ್ಲವನು ಕೊನೆಗೆ ಜಾರುವರು ॥
ಎದೆ ತಟ್ಟಿಕೊಳ್ಳುವರು, ಆಗೊ ಆಯ್ತೆನುವರು ।
ಮೊದಲಿನಾ ಸ್ಥಿತಿಯಲ್ಲೆ ಕಡೆಗೆ ಮಲಗುವರು ॥

ಇಂತಾದುದಲ್ತೆ ಬೇಸಗೆಯ ಮಳೆಯಾಟ ।
ಬಂತೆಂದು ಕಾದಿರಲ್ಕಾಯ್ತೇನು ಮಾಟ ॥

---

## ೩೭. ಗೇರುಸೊಪ್ಪೆಯ ಜೋಗು

ತಂದೆಯಪ್ಪಣೆಯಂತೆ ದಂಡಕಾರಣ್ಯಕೆ ।
ಯ್ತಂದ ಲೀಲಾಪುರುಷ ರಾಮಮೂರುತಿಯು ॥
ಶರದ ಮೊನೆಯಿಂದಂಬುತೀರ್ಥದೊಳಗಾವುದನು ।
ಹೊರಡಿಸಿದನಾ ನದಿಯಿದೇ ಶರಾವತಿಯು ॥ ೧ ॥

ಅಲ್ಲದೊಡೆ ಜನರೇಕೆ ತೊರೆದಿತರ ಕಾರ್ಯಗಳ ।
ನೆಲ್ಲಮಂ, ಧನದ ಹೇರಳ ವೆಚ್ಚದಿಂದ ॥
ಸಂತುಷ್ಟ ಚಿತ್ತದಿಂ ಗಿರಿಯ ತುದಿಯಿಾ ಜೋಗಿ ।
ಗಿಂತು ಬರುವರು ದೂರ ದೇಶಂಗಳಿಂದ ॥ ೨ ॥

ಒಂದಕೀರೆರಡಾಗಿ ನಿಜಧವಳ ಕೀರ್ತಿಯಿಂ ।
ಚಂದಿರನ ಗರ್ವವಂ ಭಂಗಗೊಳಿಸುತ್ತ ॥
ಸುರಲೋಕದಾ ಧೇನು ಭೂಲೋಕಕಿಳಿತಂದು ।
ಸುರಿವುದೇನಿದು ಪಾಲ ಧಾರೆ ಚಿಮ್ಮುತ್ತ ॥ ೩ ॥

ಕಾಂತನೊಂದಿಗೆ ಪೋಪೆನೆಂಬ ಸದ್ವ್ರತದಿಂ ವ ।
ನಾಂತರಕೆ ಪೊರಮಡಲು ಜಾನಕಿಯು ತಾನು ॥
ಏವೇಳ್ವೆನವಳ ಸೀರೆಯನು ನೇಯಲ್ಕೆ ವನ ।
ದೇವಿಯರು ತೊಳೆದುದರೊಳುಳಿದರಳೆಯೇನು ॥ ೪ ॥

ಎತ್ತರದ ಗಿರಿಯ ಶಿಖರದೆ ವೇಗದಿಂದ ಬೀ।
ಳುತ್ತಿರ್ದುದ ಕೆಳಗೆ, ಜಲಧಾರೆಯದರಿಂದ ||
ಘಾತಿಯಾದಪುದೆಂಬ ಸಂದೇಹದಿಂದೊಗೆದ ।
ಭೀತಿಯಿಂ ಬೊಬ್ಬಿರಿದು ಕಡುನಡುಕದಿಂದ || ೫ ||

ಮರಳಿ ತುಂತುರ್ಧ್ವನಿಯ ರೂಪದಿಂ ಮೇಲ್ವಾಯ್ದು ।
ಬರುತಿರಲ್ಕೀ ಜೋಗು ಬೋಧಿಸುವುದೆಂದು ||
ಉರುಳುತಿಹ ಚಕ್ರದಂತೇಳುಬೀಳುಗಳ ದಶೆ ।
ತಿರುತಿರುಗಿ ಬಹುದೆ ಬಾಳಿನ ನಿಯಮವೆಂದು || ೬ ||

ಸೊಬಗಿನಿಂ ಕಂಗೊಳಿಪ ಸದಿಯು, ಪೇರ್ಬೆಟ್ಟಗಳು, ।
ನಿಬಿಡ ಕಾನನಗಳೇಕಾಂತ ಪ್ರದೇಶಂ, ||
ಎಲ್ಲವರ ತಲೆಯೊಳೀ ಜಲಪಾತಮೆನಲು, ನಮ ।
ಗುಲ್ಲಾಸವಂ ಕುಡದುದಿಹುದೆ ಲವಲೇಶಂ? || ೭ ||

ಮೊದಲೆ ರಮಣೀಯಮಿರ್ಪುದು ವನಸ್ಥಲಮಿದು; ಸ ।
ಹೃದಯನಾಗಿರ್ಪ ಮೈಸೂರರರಸನಿದನು ||
ನೋಡಲೆಳಸುತ ಬಂದಪರ ಮನೋರಂಜನೆಯ ।
ಮಾಡಲಿನ್ನಿನಿತು ರಮ್ಯವನಾಗಿಸಿದನು || ೮ ||

ಎಂತೆನಲು — ಶಿಲೆಯಿಂದ ಕಟ್ಟಿಸಿದ, ಚಿತ್ರಗಳ ।
ನಾಂತಿಟ್ಟಿಗೆಗಳ ಹಾಸಿದ ಮಂದಿರವನು ||
ತಂಗಲು ಮನೋಹರಮಿಹಂತೆ, ಗಾರೆಯ ಲೇಪ ।
ನಂ ಗೆಯ್ಸಿ ಸುಪರಿಷ್ಕೃತಂಗೊಳಿಸಿರುವನು || ೯ ||

ಬಳಿಕ ಜೋಗಿನ ಧಾರೆ ಕೆಳಗೆ ಗಿರಿಗುಹೆಯ ಬಾ ।
ಯೊಳಹುಗುವ ಪಾತ್ರದಾ ಬಳಿಗಿಳಿಯಬಹುದು ||
ಸುಗಮಮಪ್ಪಂತೆ ನಡಿಗೆಗೆ, ಶಿಲೆಯ ಕಲ್ಗಳ ಭು ।
ಜಗ ಗತಿಯ ಮೆಟ್ಟಲಿನ ಹಂತಿ ಕಡೆದಿಹುದು || ೧೦ ||

ದಾರಿಯೊಂದಾರು ಮೈಲುದ್ದವಿಲ್ಲಿದೆ; ವನವಿ ।
ಹಾರಕೋಸುಗ ಪರ್ವತಗಳ ಪಕ್ಕದಲಿ ॥
ಒಂದಿರುಳಿನೊಳಗೆಸಗಿದುದದು ಭೂಪೋತ್ತಮನು ।
ಬಂದ ಸಂದರ್ಭದಲಿ ಬಲು ಸಾಹಸದಲಿ ॥ ೧೧ ॥

ನೊಂದು ಲೌಕಿಕದ ನಾನಾ ವಿಧದ ಕೋಟಲೆಗ ।
ಳಿಂದ ಬೆಂದಿರ್ಪ ಮನವಿಾ ಪ್ರಪಾತವನು ॥
ನೋಡುತ್ತ ಕಾನನಂಗಳ ಪರಿಸರದೊಳಗಲೆ ।
ದಾಡುತ್ತ, ಮಾಡಿ ತಣ್ಣೀರ ಜಳಕವನು ॥ ೧೨ ॥

ಬಳಿಕೊಂದು ಗಳಿಗೆಯೊಳಗಾಗಿ ತಾಂ ಮರಹಿನಿಂ ।
ದಳಿಸಿ ಬಾಹ್ಯಪ್ರಪಂಚದ ವಿಷಯಗಳನು ॥
ಗಳಿಸಿ ಬ್ರಹ್ಮಧ್ಯಾನದನುಭವದ ಭಾಗ್ಯವಂ ।
ಕಳೆದುಬಿಟ್ಟಿತು ತನ್ನಯಾ ದುಗುಡಗಳನು ॥ ೧೩ ॥

ಒರೆಯಲೆಂತೀ ಬ್ರಹ್ಮ ನಿರ್ಮಿತಮದಾದ ಸುಂ ।
ದರಮಾದ ಜೋಗಿನೈಶ್ವರ್ಯಮಿನಿತಿರಲು? ॥
ಒಮ್ಮೆ ನಿಲ್ಲಿಸಲಿದರ ಮೇಲೆಮ್ಮ ದೃಷ್ಟಿಯನ ।
ದಮ್ಮದಿದರಿಂ ಮತ್ತೆ ಹಿಂತಿರುಗಿ ಬರಲು ॥ ೧೪ ॥

ಒಮ್ಮೆಯಾದೊಡವಿಾ ಜಲಪ್ರಪಾತದ ನೋಟ ।
ಮೆಮ್ಮ ದೃಷ್ಟಿಗೆ ಗೋಚರಿಸಲದಂ ಕಂಡು ॥
ಕರಗಿ ಸ್ವಾಂತಃಕರಣಮುದರೊಡನೆ ಮುದದಿಂದ ।
ಬೆರೆದಪುದು ಸಾರೂಪ್ಯವಂ ತಳೆದುಕೊಂಡು ॥ ೧೫ ॥

ಈ ನೀರಿನಾ ಪ್ರವಾಹಂ ಗಿರಿಯ ಗವಿಯೊಳಗೆ ।
ಲೀನವಾದಪುದವಿಚ್ಛಿನ್ನವಾಗೆಂತು? ॥
ತಲ್ಲೀನವಕ್ಕೆ ತವ ಚರಣಗಳ ಬಳಿಸಾರು ।
ತಲ್ಲೆ, ಶಂಕರನೆ, ಮಾನಸವೃತ್ತಿಯಂತು ॥ ೧೬ ॥

---

## ೩೭. ಮರುಪತ್ಯದ ವೇಳೆಯ ಭಾವನೆಗಳು

ಮಗುವು ತಾಂ ಮಲಗಿದಲ್ಲಿಂದಂಬೆಗಾಲಿಡಲು,
ನಗುವಂತೆ ಮುದದೆ ತಾಯ್ತಂದೆಗಳು ನಿಂದು,
ಹಿಡಿದ ಹಾಸಿಗೆಯಿಂದ ನಾನೆದ್ದು ಕುಳಿತಾಗ
ಮಡದಿಮಕ್ಕಳು ನಗುವರಗೊ ನೋಡ ಬಂದು.

ಕುಳಿತಾಗ ಬಳಿಕೆದ್ದು ನಿಂತಾಗವರಿಗಪ್ಪ
ಪುಳಕವೇರಿದ ಹರ್ಷವೇನೆಂಬೆ ನಾನು!
ನಿಂತ ತಾಣದೆ ಹಜ್ಜೆಯೆರಡ ಮುಂದಿಡಲವರ
ಸಂತಸದ ನೆರೆ ಬರ್ಪುದಂ ಪೇಳ್ವುದೇನು!

ಎರಡು ಪರಿಯಿಹುದು ನೆರೆ: ಸಾಗರದೊಳೆನಿತು ನೀ
ರ್ನೆರೆದುಂಬಿ, ತೋರ್ದೊಡಂ ಪೆರ್ದೆರೆಗಳೆದ್ದು,
ವಾರಿಧಿಯು ತಾನು ತನ್ನೊಳೆ ನೆಲಸಿ ಮೆರೆದಪುದು,
ಮೀರೆ ಮಿಾರದಲೆ, ಗಾಂಭೀರ್ಯದಿಂದಿದ್ದು.

ಬೇರೊಂದು ತೆರವಿಹುದು: ಕಟ್ಟುಕಟ್ಟೆಯನೊಡೆಯು
ತೂರೆಲ್ಲ ನೀರಾಗಿ ಹರಿದು ನೆರೆ ನೆರೆದು
ತುಂಬಿ ಪಸರಿಸಿದೊಡಂ, ಕಾದು ಬಿಸಿಲಿನ ಬೇಗೆ
ಯಿಂ ಬೆಂದ ನೆಲವ ತಣಿಪುದು ತಣ್ಪನೆರೆದು.

ಅಂತೊಮ್ಮೆ ಕಣ್ದಣಿಯೆ ನೋಡಿದೊಡೆ, ತಂತಮ್ಮ
ಸಂತಸವನಂಕೆಯೊಳಗಿರಿಸಿಕೊಳ್ಳುತ್ತ
ಮನದೊಳಗೆ ಮಾತ್ರ ನಲವಾಂತು ನಲಿವರು, ತೋಷ
ವನು ತಮ್ಮ ಮುಖಮುದ್ರೆಯಲೆ ಸೂಚಿಸುತ್ತ.

ಒಮ್ಮೊಮ್ಮೆ ಹಿಂದೆ ರೋಗಂ ಪ್ರಜ್ವಲಿಸಿದಾಗ
ತಮ್ಮ ಕಳವಳದಾ ನಿರಾಸೆಗಡಲೊಳಗೆ
ತೇಗುಮುಳುಗಾದುದಂ ನೆನೆದು ಕರಗುವರು ನೀ
ರಾಗುತಾನಂದಾಶ್ರುಜಲಧಾರೆಯೊಳಗೆ.

ಕಂದಿವೋದೆನ್ನ ಜೀವಾಂಕುರಕ್ಕೊದಗಲಾ
ನಂದ ಮೇಣಕ್ಕರೆಯ ಬಿಸಿಲು ನೀರುಗಳು,
ಗಳಿಗೆಗಳಿಗೆಗೆ ಪುಷ್ಟಿಯಂ ಪೊಂದುತಂಗಗಳು,
ಬೆಳೆಯಬೇಕೊಳಹೊರಗ ಧಾತುಶಕ್ತಿಗಳು.

ಆದೊಡೆನಗೀವುದಂ ಬಣ್ಣಿಸುವುದೆಂತು! ಬೇ
ಕಾದುದಂ ಕೊಡರೇನ ಗೆಯ್ದೊಡಂ ಕೊಡರೈ;
ಹಿತವೆಂದು ತೋರಿ ನಾಂ ಬಯಸಿದುದನೊಂದನುಂ
ಮಿತಿಯಿಂದಲಾದೊಡಂ ಸೇವಿಸಲು ಬಿಡರೈ.

ಅರಿತಿಹುದೆ ಶಿಶುವು ರುಚಿಗಳ ರುಚಿಯ? ಮೊಲೆವಾಲ
ಹೊರತಿತರ ತಿಂಡಿತಿನಿಸದಕೆ ಬೇಕೇನು?
ತಿಳಿದಾತನಾಗಿರ್ದು ಪಾಲ್ಗಂಜಿನೀರ ಕುಡಿ
ದುಳಿದುದಂ ತೊರೆದು ಮರೆದಪುದೆಂತು ನಾನು?

“ಅನ್ನದಗುಳಿನಿತು ಶೀಘ್ರದಿ ಬೇಡ — ಭಯವಪ್ಪ
ದಿನ್ನು ಕೇಳಲುಬಾರದೀ ವಾರದೊಳಗೆ”.
ಪಲ್ಯವೋ — ಕಾಫಿಯೋ — “ಸದ್ಯದಲಿ ನಾಂ ಬಳಸ
ಲೊಲ್ಲೆ, ಕೊಡಲಾಗದಿನ್ನೆಂಟು ದಿನಗಳಿಗೆ.”

“ಇದು ನಂಜು ಹರಡಿಸುವುದಾ ಪದಾರ್ಥವು ಕಫ
ಪ್ರದವಾದುದಿದು ವಾತಜನಕವಾಗಿಹುದು.”
“ಇದಜೀರ್ಣಕರಮಲ್ತೆ?” “ನಿದ್ದೆಗಿದು ಹಾಳಲ್ತೆ?”
“ಅದರಿಂದ ಬಹು ಪಿತ್ಥದುದ್ರೇಕವಹುದು.”

“ನಾಲಗೆಯ ರುಚಿಯೊಂದೆ ಮಾನವರ ಕೆಡಿಸುವುದು —
ಸೋಲುವರೆ ಇಂದ್ರಿಯಂಗಳ ಬಯಕೆಗಳಿಗೆ?”
“ಬಾಯಿಗಾವುದು ತಾನು ತೋರ್ದಪುದೊ ರುಚಿಯೆಂದ
ಪಾಯವಡಗಿಹುದೆಂದು ತಿಳಿವುದದರೊಳಗೆ.”

ಇಂತೆನ್ನ ಬರಿದೊಣಗು ಮಾತುಗಳ ಮಾತ್ರದಿಂ
ಸಂತವಿಸೆ, ಬಲವ ಪಡೆದಪುದೆಂತು ನಾನು?
ಸಾಕೆನಿಸುವನಿತಿರ್ದೊಡಂ ಬಿಸಿಲು ನೀರುಗಳು,
ಬೇಕಾದ ಮಣ್ಣಿಲ್ಲದಿರಲು ಫಲವೇನು?

ನುಡಿದಿರ್ದೊಡಂ ವೈದ್ಯರೆನಗೀಯಬಹುದೆಂದು,
ಮಡದಿಮಕ್ಕಳು ಕೊಡಲೊಡಂಬಡುವುದಿಲ್ಲ.
ಬಿಡಲೊಲ್ಲ ಪೂಜಾರಿ ದೇವರಿತ್ತೊಡಮೆಂಬ
ನುಡಿಯನನುಸರಿಸಿ ನಡೆವಂತಿರ್ಪುದೆಲ್ಲ.

ಕಲಿಸಬೇಕಿವರಿಗೆನಿಸುವುದು ಬುದ್ಧಿಯ ಬೇಗ—
ಕಲಿವೆ ನಾಂ ಮೊದಲು ನಡೆಯಲ್ಕೆದ್ದು ನಿಂದು.
ಬಾಲ ಗೋಪಾಲನೇ ಗೋಕುಲದ ಮನೆಗಳಲಿ
ಶೀಲದಿಂ ಕಳ್ಳನಾದಂ ಬೆಣ್ಣೆ ತಿಂದು!

ಅವತಾರಿಯಾದವಂ ಗೆಯ್ದನಂತೆನಲು, ನಾ
ವವನನನುಕರಿಸಿದೊಡೆ ದೋಷವಹುದೇನು?
ಹರಿಯೆ, ಮತಿಶಕ್ತಿಗಳನೆನಗೆ ಕರುಣಿಸು, ಚಿಕ್ಕ
ಹರೆಯದಲಿ ನೀನು ಗೆಯ್ದಂತೆಸಗೆ ನಾನು.

---

## ೩೮. ಅಮರನಾತಂ – ಗಾಂಧಿತಾತಂ

ಗೆಳೆಯನೇ, ಸುದ್ದಿಯಂ ತಂದವನಿಗೊರೆಯೈ ।
ಅಳಲು ಕಾರಣವಿಹುದೆ? ದುಃಖವಂ ತೊರೆಯೈ ॥
ಜೀವನಪಥವನಿಳೆಗೆ ಸಾರಿದಾತನಿಗೆ ।
ಸಾವಹುದೆ? ಸಾವೆಂತಹುದು ಮಹಾತ್ಮನಿಗೆ? ॥ ೧ ॥

ಕೋವಿ ಹಾರಿಸಿದ ಹೇಡಿಗೆ ಹೇಳು, ಹೊರಡು ।
ಕೇವಲ ಮನುಷ್ಯನಾ ಗುಂಡುಗಳು ಬರಡು ॥
ವರ ದೈವದತ್ತಾತ್ಮಶಕ್ತಿ ಪ್ರಭೆಯನು ।
ಮರೆಸನೈ, ಕೊಂದೊಡಂ ತನುವಂ, ಮಡೆಯನು ॥ ೨ ॥

ಆತನೆಂದಾದೊಡೆಯುಮೆತ್ತೆತ್ತಲೆಲ್ಲ ।
ಪಾತಕವೆ ತುಂಬಿದೀ ಲೋಕದವನಲ್ಲ ॥
ಆತನೇ ಜೀವಿತವ ಕಳಕೊಂಡನೇನು?
ಆತನಂ ಕಳೆದಿಹುದು ಜೀವಿತವೆ ತಾನು ॥ ೩ ॥

ಬಗೆಗೆಟ್ಟವರಿಗೆ ಧೈರ್ಯವನಿತ್ತನಾತಂ ।
ಹಗೆಹಿಂಸೆಗಳ ಬೇರನೇ ಕಿತ್ತನಾತಂ ॥
ಪಳಗಿಸಿದನೆಲ್ಲರೆದೆ ತೋಳ ತೂಳವನು ।
ತೊಳೆದನೆಲ್ಲರ ಕಲುಷಿತಾಂತರಂಗವನು ॥ ೪ ॥

ಎಮ್ಮ ಪಾಪಕೆ ಶುದ್ಧಿಯಂ ಗೆಯ್ದನಾತಂ ।
ಎಮ್ಮ ತಪ್ಪಿಗೆ ದೂಷಣವ ಹೊತ್ತನಾತಂ ॥
ಸಿದ್ಧಿಸಲ್ಕವನ ಸತ್ಯಾಗ್ರಹವು ಬಲಿದು ।
ಗೆದ್ದ ಫಲ ಭುಂಜಿಸಿತು ಸರ್ವಜನ ಸಲಿದು ॥ ೫ ॥

ಸತ್ತನೇ? ಪೋದನೇ? ಇಲ್ಲೆಲ್ಲೈ! ಅವನು ।
ಹೊತ್ತಿಸಿದ ದೀಪ ಬೆಳಗುವುದು ಮಾರ್ಗವನು ॥
ತೋರಿಸುತ ತಪ್ಪುದಾರಿಯನು ಬಿಡಿರೆಂದು ।
ಸಾರಿ, ನಮ್ಮೆಲ್ಲರನು ನಡಿಸುವುದು ಮುಂದು ॥ ೬ ॥

ತಿಳಿಸಯ್ಯ, ಹೊರಡು, ಸುದ್ದಿಯ ತಂದವನಿಗೆ ।
ಅಳಬೇಡ; ಕಾರಣವೆ ಇಲ್ಲ ಕಂಬನಿಗೆ ॥
ಪೊಡವಿಯಲಿ ಬಾಳ್ವ ಹದನವ ಕಲಿಸಿದಾತಂ ।
ಮಡಿವನೇ? ಅಮರನಾತಂ ಗಾಂಧಿತಾತಂ ॥ ೭



# ನಮ್ಮ ಇತರ ಪ್ರಕಟಣೆಗಳು

ಐತಿಹಾಸಿಕ ಕಥಾವಳಿ—ಶ್ರೀ. ಪಂಜೆ ಮಂಗೇಶರಾವ್ ಇವರಿಂದ.
ಪಶ್ಚಾತ್ತಾಪ (ಕಾದಂಬರಿ)—ಶ್ರೀ. ಮುಳಿಯ ತಿಮ್ಮಪ್ಪಯ್ಯನವರಿಂದ.
ಹಾಸನ್ ಟೋಪಿ—ಶ್ರೀ. ಸುಬ್ರಾಯಾನುಜರವರಿಂದ.
ಪಾಪ-ಪುಣ್ಯ—ಶ್ರೀ. ಯಚ್. ವಿ. ಸುಬ್ರಾಯಾನುಜರವರಿಂದ.
ಸ್ವಲ್ಪ ನಗಬಾರದೆ? (ನಗಿಸುವ ಸಣ್ಣ ಕಥೆಗಳು ಮತ್ತು ಲೇಖಗಳು).
ಕನ್ನಡ ಜೈನ ವಾಙ್ಮಯ—ಶ್ರೀ. ಆರ್. ತಾತಾಚಾರ್ಯ, ಎಂ.ಎ., ಎಲ್.ಟಿ.
ಇವರಿ
ಚೆಂಗಲವೆ (ಕವನ ಸಂಗ್ರಹ)—ಶ್ರೀ. ಪಾಂಡೇಶ್ವರ ಗಣಪತಿರಾವ್ ಇವರಿಂದ.
ಅಜಿತ ತೀರ್ಥಂಕರ ಪುರಾಣ ತಿಲಕಂ—ಭಾಗ ೧—ರನ್ನಕವಿ ವಿರಚಿತ.
ಭಕ್ತಶಿಖಾಮಣಿ ದಾಮಾಜಿಪಂತ (ಸಂಗೀತ ನಾಟಕ)—
ಶ್ರೀ. ಜಿ. ಯನ್. ಲಕ್ಷ್ಮಣ ಪೈ ಇವರಿ
ಅಹಿಂತಕ (ಏಕಾಂಕ ನಾಟಕ)—ಶ್ರೀನಂದ ಇವರಿಂದ.
ಕೋದಂಡನ ಉಪನ್ಯಾಸಗಳು—ಶ್ರೀ. ಜಿ. ವಾಮನ ಭಟ್ಟ ಇವರಿಂದ.
ಮುರುಕುಡಂಬೂಕು—ಶ್ರೀ. ಹುರುಳಿ ಭೀಮರಾವ್ ಇವರಿಂದ.
ಮುಂಬೆಳಕು (ಕವನ ಸಂಗ್ರಹ).
ಉದ್ಘೋಷ (ರಾಷ್ಟ್ರೀಯ ಪದಗಳ ಸಂಗ್ರಹ).

## ಶಿಶುಸಾಹಿತ್ಯ

ಗುಬ್ಬಿ ಪಾಯಸ }
ಪಾಪೋಸಿನ ಫಜೀತಿ } ಮಕ್ಕಳ ಕಥೆಗಳು.
ಗಡ್ಡದ ಅಜ್ಜಯ್ಯ }
ಗಡಗಡ ಗಡಿಗೆ
ಗಿರಿಗಿಟಿ (ಮಕ್ಕಳ ಪದಗಳು)
ಶಿಶುಗೀತಮಾಲೆ
ಅಭಿನಯಗೀತಾವಳಿ
ಪದ್ಯರತ್ನಾವಳಿ
ಕಾಗದ-ಕತ್ತರಿ (ಗೆಯ್ಮೆಯ ಕೈಪಿಡಿ)
ದೇಶಿ ದೀಪಗಳು ( ,, ,, )
ಕಾಣಿಕೆ (ಗಾಂಧೀ ಗೀತಗಳ ಸಂಗ್ರಹ).